# ನನ್ನ
# ಆರಂಭ ಜೀವನ

ಕ. ಗಾಂಧಿ

[illegible]ರು ಮತ್ತು ಸಂಪಾದಕರು

**ದಿವಂಗತ ಮಹಾದೇವ ದೇಸಾಯಿ**

**ಮ. ಗೋವಿಂದರಾಯರು**

ಅವಧೂತ ಗ್ರಂಥಾಲಯ
ಹುಬ್ಬಳ್ಳಿ

# ನನ್ನ ಆರಂಭಜೀವನ

## ಮೋ. ಕ. ಗಾಂಧಿ


ಸಂಗ್ರಾಹಕರು ಮತ್ತು ಸಂಪಾದಕರು:

**ದಿವಂಗತ ಮಹಾದೇವ ದೇಸಾಯಿ**

ಕನ್ನಡಿಸಿದವರು.

**ಮ. ಗೋವಿಂದರಾಯರು**



ಮಾರಾಟಗಾರರು:

**ಸಾಹಿತ್ಯ ಭಾಂಡಾರ ಹುಬ್ಬಳ್ಳಿ**

ಗುರುದಕ್ಷಿಣೆ

ನನ್ನ ಕನ್ನಡದ ಗುರು

ಪೂಜ್ಯ

**ದ. ರಾ. ಬೇಂದ್ರೆಯವರಿಗೆ**

ಮ. ಗೋವಿಂದ

# ಬಿನ್ನಹ

ಓದುಗರ ಕೈಯಲ್ಲಿರುವ ಈ ಪುಸ್ತಕ ಮಹಾತ್ಮಾ ಗಾಂಧಿಯವರ My early lifeನ ಭಾಷಾಂತರ. ಇದನ್ನು ಇಂಗ್ಲಿಷಿನಲ್ಲಿ ಸಂಗ್ರಹಿಸಿ ಸಂಪಾದಿಸಿದವರು ದಿವಂಗತ ಮಹಾದೇವ ದೇಸಾಯಿಯವರು. ಈ ಪುಸ್ತಕವನ್ನು ಹೀಗೆ ಸಂಕ್ಷೇಪಿಸಿ ಸಿದ್ಧಗೊಳಿಸಿದ ಉದ್ದೇಶ, ಆವಶ್ಯಕತೆಗಳನ್ನು ಅವರು ಮೂಲದಲ್ಲಿ ಹೇಳಿಯೆ ಇದ್ದಾರೆ. ಈ ಕನ್ನಡ ಆವೃತ್ತಿಯೂ ಅದಕ್ಕೆ ಹೊರತಾಗಿಲ್ಲ. ಇದನ್ನು ಪ್ರಕಟಿಸಲು ಒಪ್ಪಿಗೆ ಕೊಟ್ಟ Oxford University Press ನವರಿಗೆ ನಾವು ಉಪಕೃತರು.

ಗುಜರಾತಿ, ಇಂಗ್ಲಿಷ್ ಮುಂತಾದ ಶಬ್ದಗಳನ್ನು ಉಚ್ಚರಿಸುವಲ್ಲಿ ನಾನು ಕನ್ನಡ ಪರಂಪರೆಯನ್ನೇ ಹಿಡಿದಿದ್ದೇನೆ. ಗುಜರಾತಿಯ 'ಸೇಟಜಿ' ಯೂ ಕನ್ನಡ 'ಸೆಟ್ಟಿ'ಯೂ ಒಂದೇ. ಅಲ್ಲಿಯ 'ಸೇಟಜಿ' ಇಲ್ಲಿಗೆ ಬಂದೊಡನೆ 'ಸೆಟ್ಟಿ' ಯಾಗಲೇ ಬೇಕು. ಆದ್ದರಿಂದ ಅವನನ್ನು ಕನ್ನಡ ನಾಲಗೆಗೆ ಅನುಗುಣವಾಗಿ 'ಸೆಟ್ಟಿ' ಯೆಂದಿದ್ದೇನೆ. ಇದಲ್ಲದೆ ಇಂಗ್ಲಿಷ್ ವ್ಯಂಜನಾಂತ ಶಬ್ದಗಳನ್ನು ಕನ್ನಡದಲ್ಲಿ ಅಕಾರಾಂತದಂತೆ ಉಚ್ಚರಿಸುವ ರೀತಿ ಬರತೊಡಗಿದೆ. ಇದು ಉಚ್ಚಾರಕ್ಕೆ ಕಷ್ಟ, ಕನ್ನಡದ ಸೊಲ್ಲಿಗೆ ಸಲ್ಲದ್ದು, ಎಂದೇ ನನ್ನ ಭಾವನೆ. ಆದ್ದರಿಂದ ಅವನ್ನು ವ್ಯಂಜನಾಂತ ಅಥವಾ ಉಕಾರಾಂತವಾಗಿ ಬಳಸಿದ್ದೇನೆ. ಈ ಪುಸ್ತಕದಲ್ಲಿ ಬಳಕೆಯಾದ ಕೆಲವೊಂದು ವಿಶಿಷ್ಟ ಶಬ್ದಗಳ ಅರ್ಥ ಕೊನೆಗೆ ಕೊಟ್ಟಿದೆ.

ಈ ಪುಸ್ತಕವನ್ನು ಆಮೂಲಾಗ್ರವಾಗಿ ಓದಿನೋಡಿ ಅವಶ್ಯವಿದ್ದಲ್ಲಿ ತಿದ್ದಿದವರು ಗೆಳೆಯ ನರೇಗಲ್ಲ ಪ್ರಲ್ಹಾದರಾಯರು, ಎಂ. ಎ., ಬಿ. ಟಿ. ಅವರು. ಮಹಾದೇವ ದೇಸಾಯರ ಮುನ್ನುಡಿಯನ್ನು ಕನ್ನಡಿಸಿದವರೂ ಅವರೇ. ಈ ಬಗೆಗೆ ಇವರಿಗೆ ಕೃತಜ್ಞತೆಯ ವಂದನೆ.

ಗಾಂಧೀಯುಗದ ಆರಂಭದಲ್ಲಿ ಧಾರವಾಡದ ರಾಷ್ಟ್ರೀಯ ಸಾಲೆಯಲ್ಲಿ ನನ್ನ ಶಿಕ್ಷಕರಾಗಿದ್ದು ನಮ್ಮೆಲ್ಲರಿಗೆ ಕನ್ನಡದ ದೀಕ್ಷೆ ಕೊಟ್ಟಂಥ ಗುರುವರ್ಯ **ಬೇಂದ್ರೆ**ಯವರಿಗೆ ರಾಷ್ಟ್ರಗುರು **ಗಾಂಧಿ**ಯ ಈ ಜೀವನಚರಿತ್ರೆಯನ್ನು ಭಕ್ತಿಯಿಂದ ಅರ್ಪಿಸಿದ್ದೇನೆ.

**ಅನುವಾದಕ**

# ಮುನ್ನುಡಿ

ಹಿಂದುಸ್ಥಾನದ ಸಾಲೆಗಳ ಬಾಲಕರಿಗಾಗಿ ಗಾಂಧಿಯವರ ಆತ್ಮಚರಿತ್ರೆಯ ಕಿರಿ ಆವೃತ್ತಿಯೊಂದನ್ನು ಪ್ರಕಟಿಸಬೇಕೆಂದು 'ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್ಸಿ'ನವರು ಸಿದ್ಧತೆ ಮಾಡಿದುದು ಸಂತೋಷದ ವಿಚಾರವೇ ಸರಿ. ನಾನು ಗಾಂಧಿಯವರ ನಿಕಟ ಸಹವಾಸದಲ್ಲಿದ್ದುದರಿಂದಲೂ ಅವರ ಆತ್ಮಕಥೆಯನ್ನು ಗುಜರಾಥಿಯಿಂದ ಇಂಗ್ಲಿಷಿನಲ್ಲಿ ಭಾಷಾಂತರಿಸಿರುವುದರಿಂದಲೂ ತಮ್ಮ ಈ ಕಾರ್ಯದಲ್ಲಿ ನೆರವಾಗಬೇಕೆಂದು ಪ್ರಕಾಶಕರು ನನ್ನನ್ನು ಕೇಳಿಕೊಂಡರು. ನಾನು ಸಂತೋಷದಿಂದ ಒಪ್ಪಿಕೊಂಡೆ. ಆದರೆ ಮೂಲ ಆತ್ಮಚರಿತ್ರೆ ಅರ್ಕದ ಆದರ್ಶವೇ ಆಗಿದ್ದು ಸಂಕ್ಷೇಪಿಸುವುದು ಸಾಧ್ಯವೇ ಇಲ್ಲವೆಂಬಂತಿದೆ. ಅಂತೂ ನನ್ನ ಈ ಕಾರ್ಯ, ಮೂಲಕ್ಕೆ ಸಮರ್ಪಕ ನ್ಯಾಯ ಒದಗಿಸಿದೆಯೋ ಇಲ್ಲವೋ ಎಂಬುದನ್ನು ನಿಶ್ಚಿತವಾಗಿ ಹೇಳಲಾರೆ. ಆದರೆ ಎಳೆ ಪ್ರಾಯದ ಹುಡುಗರ ಅಭಿರುಚಿಗೆ ಒಗ್ಗದ ಎಷ್ಟೋ ನೈತಿಕ ಧಾರ್ಮಿಕ ಸಮಸ್ಯೆಗಳ ಚರ್ಚೆಯ ವಿವರಗಳನ್ನು ಮೂಲಕ್ಕೆ ಬಾಧೆಬರದಂತೆ ಬಿಟ್ಟುಬಿಡಬಹುದೆಂದು ಬಗೆದು ಈ ಸಾಹಸಕ್ಕೆ ಕೈಹಾಕಿದೆ. ಹೀಗೆ, ನನ್ನ ಮಿತ್ರ ಶ್ರೀ. ವಾಲ್‌ಜಿ ದೇಸಾಯಿಯವರು ಭಾಷಾಂತರಿಸಿದ 'The History of Satyagraha in South Afrika' ಎಂಬ ಗ್ರಂಥದೊಳಗಿನ ಕಥಾಭಾಗವನ್ನು ಮಾತ್ರ ತೆಗೆದುಕೊಂಡಿದ್ದೇನೆ. ಮತ್ತು ಅಲ್ಲಿಯ ಹಿಂದೀ ಸಮಸ್ಯೆಯ ಅತಿ ಸೂಕ್ಷ್ಮ ವಿವರಗಳನ್ನು ಬಿಟ್ಟುಕೊಟ್ಟು ಎಲ್ಲ ಕಾಲಕ್ಕೂ ರುಚಿಸುವಂತಹ ನಿರಂತರ ನೈತಿಕ ಸತ್ವವುಳ್ಳ ಪ್ರಸಂಗಗಳನ್ನು ಮಾತ್ರ ಉಳಿಸಿಕೊಂಡಿದ್ದೇನೆ.

ಈ ಸಂಕ್ಷೇಪವು ೧೯೨೧ನೆ ವರ್ಷಕ್ಕೆ ಮುಗಿಯುವುದು ಯೋಗ್ಯವೆನಿಸಿತು. ಇದಕ್ಕೆ ಕೆಲಮಟ್ಟಿಗೆ ಕಾರಣವೂ ಇತ್ತು. ಹೇಗಿದ್ದರೂ, ೧೯೨೧ರ ಈಚೆಗಿನ ಆತ್ಮಕಥೆಯನ್ನು ಬಿಟ್ಟುಕೊಟ್ಟಿರುವುದರಿಂದ ಸಾಲೆಯ ವಿದ್ಯಾರ್ಥಿಗಳ ದೃಷ್ಟಿಯಿಂದ ಅದರಲ್ಲಿ ಮಹದಂತರವಾಗಿಲ್ಲ. ತೀರ ಚಿಕ್ಕವನಾದ ಓದುಗನೂ ಗಾಂಧಿಯವರ ಇತ್ತೀಚೆಗಿನ ಜೀವನದ ಬಗೆಗೆ ಕೇಳಿರಬಹುದಾದ ಸಂಗತಿಗಳು ಅವರ ಆರಂಭದ ಜೀವನದಲ್ಲಿ ಬೀಜರೂಪವಾಗಿ ಬಂದೇ ಇವೆ. ಸತ್ಯಶೋಧನೆ ಹಾಗು ಸತ್ಯನಿಷ್ಠೆಯ ಜ್ಯೋತಿ ಅವರ ಜೀವನದಲ್ಲಿ ಆರಂಭದಿಂದಲೂ ನಂದಾದೀಪದಂತೆ ಶಾಂತವಾಗಿ, ನಿಧಾನವಾಗಿ,

ಬೆಳಗುತಿದ್ದುದು ಕಂಡು ಬರುತ್ತದೆ. ಸತ್ಯವೆಂದರೆ ಬರಿಯ ಸತ್ಯಸಂಧತೆ ಅಲ್ಲ. ಸತ್ಯವೆಂದರೆ ದೇವರು. ಅರ್ಥಾತ್ ಪ್ರೇಮ ಅಥವಾ ಅಹಿಂಸೆ. ಮಹಾ ಮಹಾ ರಾಜ್ಯ ಸಾಮ್ರಾಜ್ಯಗಳನ್ನು ಪ್ರತಿಭಟಿಸುವ ಪರಾಕ್ರಮಕ್ಕೆ ಸಮಾನ ವಾದ ಧೈರ್ಯದ ಉಗಮವು ಇವರ ಸತ್ಯದ ಜಾಗೃತನಿಷ್ಠೆಯಲ್ಲಿದೆ. ಇಂತಹ ಸತ್ಯಜೀವನವನ್ನು ಸಾಧಿಸಿ ತೋರಿಸಬೇಕಾದರೆ ಪ್ರೇಮದ ಬಲಬೇಕು. ಹೀಗೆ—ಇಮರ್ಸನ್ನನು ಹೇಳುವಂತೆ—'ಈ ಧೈರ್ಯಶಾಲಿ' ಈ ಪವಿತ್ರ ವಾದ ಧೈರ್ಯದಿಂದ 'ಎಲ್ಲೆಡೆಗೂ ಉದ್ಧಾರಕರ್ತೃವಾಗುತ್ತಾನೆ. ಇವನು ಒದಗಿಸುವ ಬಿಡುಗಡೆ ಆದರ್ಶವಾದದ್ದು. ಸ್ವತಂತ್ರತೆಯ ಸತ್ಯಲೋಕದಲ್ಲಿ ಸ್ವಾತಂತ್ರ್ಯವಿರುವುದು ಸತ್ಯವಾಡಲು ಮಾತ್ರ; ಸುಳ್ಳಾಡಲಿಕ್ಕಲ್ಲ.' ಸ್ವಾತಂತ್ರ್ಯವಿರುವುದು ಸೇವೆಗೆಯ್ಯಲು ಮಾತ್ರ; ಒತ್ತಾಯದಿಂದ ಸೇವೆ ಪಡೆಯುವುದಕ್ಕಲ್ಲ. ಸ್ವಾತಂತ್ರ್ಯವಿರುವುದು ತನ್ನನ್ನು ಬಲಿಕೊಡಲು ಮಾತ್ರ; ಅನ್ಯರನ್ನು ಕೊಲ್ಲಲಿಕ್ಕೆ, ಹಿಂಸಿಸಲಿಕ್ಕೆ ಅಲ್ಲ. ಇಂತಹ ಪವಿತ್ರ ಧೈರ್ಯವು ಗಾಂಧಿಯವರಲ್ಲಿ ೧೯೧೯ಕ್ಕಿಂತ ಮೊದಲಿನ ಅವಧಿಯಲ್ಲಿ ಕೂಡ ವಿಪುಲವಾಗಿದ್ದುದು ಕಂಡುಬರುತ್ತದೆ.

'ವಿಮರ್ಶಕರನ್ನು ಮೆಚ್ಚಿಸಲಿಕ್ಕಾಗಿ ನಾನು ಆತ್ಮಚರಿತ್ರೆಯನ್ನು ಬರೆಯುತ್ತಿಲ್ಲ. ಇದನ್ನು ಬರೆಯುವುದು ಕೂಡ ಸತ್ಯದೊಡನೆ ಒಂದು ಪ್ರಯೋಗ. ನನ್ನ ಸಹೋದ್ಯೋಗಿಗಳ ಪರ್ಯಾಲೋಚನೆಗಾಗಿ ಒಂದಿಷ್ಟು ಸಮಾಧಾನ, ಸಾಮಗ್ರಿಗಳನ್ನು ಒದಗಿಸುವುದೂ ಈ ಬರವಣಿಗೆಯ ಅನೇಕ ಉದ್ದೇಶಗಳಲ್ಲಿ ಒಂದು' ಎಂದು ಗಾಂಧಿಯವರೇ ಎರಡನೆ ಸಂಪುಟದಲ್ಲಿ ಹೇಳಿದ್ದಾರೆ.

'ಸಹೋದ್ಯೋಗಿ'ಗಳೆಂದರೆ ಸತ್ಯಾಗ್ರಹಿಗಳೆಂದು ಹೆಸರುಹೊಂದಿದವರು ಮಾತ್ರವಲ್ಲ; ಸತ್ಯ ಅಹಿಂಸೆಗಳನ್ನು ಪವಿತ್ರವೆಂದು ತಿಳಿದು ಅದಕ್ಕಾಗಿ ಎಲ್ಲವನ್ನೂ ತ್ಯಾಗ ಮಾಡಲು ಸಿದ್ಧವಾದ ಒಂದು ಬಾಂಧವವರ್ಗ ಎಂದು ನನ್ನ ತಿಳಿವಳಿಕೆ. ಈ ವರ್ಗದಲ್ಲಿ ಮೊದಲಿಗೆ ಸೇರುವವರು, ಅಥವಾ ಸೇರಬೇಕಾದವರು, ತರುಣರೇ ಎಂದು ನನಗೆ ತೋರುತ್ತದೆ. ಈ ಕಿರಿ ಆವೃತ್ತಿಯನ್ನೋದಿ ನನ್ನ ಎಳೆ ಗೆಳೆಯರು ಮೂಲ ಗ್ರಂಥವನ್ನೇ ಓದಲು ಹಂಬಲಿಸುವರೆಂದು ಹಾರೈಸುತ್ತೇನೆ.

ಎಪ್ರಿಲ್ ೧೯೩೭ **ಮಹಾದೇವ ದೇಸಾಯಿ**

# ಪರಿವಿಡಿ



# ನನ್ನ ಆರಂಭ ಜೀವನ



## ೧. ಚಿಕ್ಕಂದು

ನನ್ನ ತಂದೆ ಕಬಾ ಗಾಂಧಿಗೆ ಹಣ ಕೂಡಿಡುವ ಆಸೆ ಇರಲಿಲ್ಲ. ಆದ್ದರಿಂದ ನಮಗೆ ದೊರಕಿದ ಆಸ್ತಿ ಸ್ವಲ್ಪ ಮಾತ್ರ.

ಅನುಭವವೇ ಅವರಿಗೆ ದೊರೆತ ಶಿಕ್ಷಣ. ಗುಜರಾತಿ ಐದನೆ ತರಗತಿಯ ವರೆಗೆ ಓದಿದ್ದರೆ ಹೆಚ್ಚು. ಇತಿಹಾಸ ಭೂಗೋಲಗಳು ಅಷ್ಟಕ್ಕಷ್ಟೆ. ಆದರೆ ತಮ್ಮ ಅನುಭವಜ್ಞಾನದಿಂದ ಎಂತಹ ತೊಡಕಿನ ಪ್ರಶ್ನೆಗಳನ್ನೂ ಬಿಡಿಸುತಿದ್ದರು. ನೂರಾರು ಜನರನ್ನು ಆಳುವುದಕ್ಕೂ ಶಕ್ತರಾಗಿದ್ದರು. ಅವರು ಪಡೆದ ಧಾರ್ಮಿಕ ಶಿಕ್ಷಣ ತೀರ ಸ್ವಲ್ಪ. ಆದರೆ ಅನೇಕ ಹಿಂದುಗಳಿಗೆ ಪುರಾಣ ಪುಣ್ಯಕತೆಗಳನ್ನು ಕೇಳುವುದರಿಂದಲೂ ದೇವಸ್ಥಾನಗಳಿಗೆ ಹೋಗುವುದರಿಂದಲೂ ಸುಲಭವಾಗಿ ಉಂಟಾಗುವ ಧಾರ್ಮಿಕ ಜ್ಞಾನವನ್ನು ಪಡೆದಿದ್ದರು. ಕೊನೆಯ ದಿನಗಳಲ್ಲಿ ನಮ್ಮ ಕುಟುಂಬದ ಹಿತಚಿಂತಕರಾದ ಒಬ್ಬ ಬ್ರಾಹ್ಮಣರ ಸಲಹೆಯ ಮೇರೆಗೆ ಭಗವದ್ಗೀತೆಯನ್ನು ಓದತೊಡಗಿದರು. ಇದಲ್ಲದೆ ಪೂಜೆಯ ಕಾಲದಲ್ಲಿ ಗೀತೆಯೊಳಗಿನ ಕೆಲವು ಶ್ಲೋಕಗಳನ್ನು ಗಟ್ಟಿಯಾಗಿ ಹೇಳುತಿದ್ದರು.

ನನ್ನ ತಂದೆಯವರು ಕುಟುಂಬಪ್ರೇಮಿ, ಸತ್ಯಸಂಧರು, ಧೈರ್ಯಶಾಲಿ. ಉದಾರರೂ ಅಹುದು. ಆದರೆ ಸ್ವಲ್ಪ ಮುಂಗೋಪಿ. ಲಂಚಗುಳಿಗಳಲ್ಲ; ನಿಷ್ಪಕ್ಷಪಾತಿಗಳೆಂದು ನಮ್ಮ ಕುಟುಂಬದಲ್ಲಿ ಮಾತ್ರವಲ್ಲ, ಹೊರಗೂ ಹೆಸರು ಪಡೆದಿದ್ದರು. ರಾಜಕೋಟೆ ಸಂಸ್ಥಾನದಲ್ಲಿ ಇವರು ಕೆಲಕಾಲ ದಿವಾನರಾಗಿದ್ದರು. ಆ ಸಂಸ್ಥಾನಕ್ಕೆ ತೋರಿಸಿದ ನಿಷ್ಠೆ ಪ್ರಖ್ಯಾತವಾದುದು. ಒಮ್ಮೆ

ಅಸಿಸ್ಟಂಟ್ ಪೊಲಿಟಿಕಲ್ ಏಜಂಟ್ ರಾಜಕೋಟೆಯ ಠಾಕೂರರಿಗೆ ನಿಂದೆಯ ಮಾತನಾಡಿದ. ಈ ಅಪಮಾನಕ್ಕಾಗಿ ನಮ್ಮ ತಂದೆ ಅವನಿಗೆ ಎದುರಾಡಿದರು. ಆ ಸಾಹೇಬನ ಪಿತ್ಥ ನೆತ್ತಿಗೇರಿತು. ತನ್ನ ಕ್ಷಮೆ ಬೇಡಬೇಕೆಂದು ಕರಮಚಂದ ಗಾಂಧಿಯವರನ್ನು ಕೇಳಿದ. ಅದಕ್ಕೆ ಒಪ್ಪದಿದ್ದುದರಿಂದ ಅವರನ್ನು ಕೆಲವು ಗಂಟೆ ನಿರ್ಬಂಧದಲ್ಲಿಟ್ಟ. ಆದರೆ ಕೊನೆಗೆ ಕಬಾ ಗಾಂಧಿಯವರ ಸ್ಥಿರಮನಸ್ಸನ್ನರಿತು ಅವರನ್ನು ಬಿಟ್ಟುಬಿಟ್ಟ.

ನಮ್ಮ ತಾಯಿಯ ವಿಷಯದಲ್ಲಿ ನನ್ನ ಮನಸ್ಸಿನಲ್ಲಿ ನಿಂತ ಸ್ಪಷ್ಟವಾದ ಭಾವನೆ ಅವಳು ಸಾಧ್ವಿ, ಸಚ್ಚರಿತ್ರಳೆಂಬುದು. ಅವಳು ಬಹಳ ಧಾರ್ಮಿಕಳು. ನಿತ್ಯದ ಪೂಜೆ–ಪ್ರಾರ್ಥನೆಗಳಾಗುವ ವರೆಗೆ ಆಕೆಗೆ ಊಟದ ವಿಚಾರವೇ ಬರದು. ಹವೇಲಿಗೆ—ವೈಷ್ಣವ ದೇವಸ್ಥಾನಕ್ಕೆ—ಹೋಗುವುದು ದಿನದ ಒಂದು ಕೆಲಸ. ಆಕೆ ಚಾತುರ್ಮಾಸ ಮಾಡದಿದ್ದುದು ಎಷ್ಟು ಜ್ಞಾಪಿಸಿಕೊಂಡರೂ ನನಗೆ ನೆನಪಾಗುವುದಿಲ್ಲ. ಅತಿ ಕಠಿಣವಾದ ವ್ರತಗಳನ್ನು ಅವಳು ಕೈಕೊಳ್ಳುತ್ತಿದ್ದಳು. ಎಳ್ಳಷ್ಟೂ ಹಿಂಜರಿಯದೆ ಅವನ್ನು ಪೂರೈಸುತ್ತಿದ್ದಳು. ಬೇನೆ ಬಂದರೂ ಕೈಕೊಂಡ ವ್ರತಗಳನ್ನು ಬಿಡುತ್ತಿರಲಿಲ್ಲ. ಒಮ್ಮೆ ಚಾಂದ್ರಾಯಣ ವ್ರತ ಕೈಕೊಂಡಾಗ ಆಕೆ ಬೇನೆ ಬಿದ್ದುದು. ಆದರೂ ಅದನ್ನು ಪೂರೈಸಿ ಕೊನೆಗಾಣಿಸಿದುದು ಇನ್ನೂ ನನಗೆ ನೆನಪಿದೆ. ಒಂದೇಸವನೆ ಎರಡು ಮೂರು ದಿನಗಳ ಉಪವಾಸ ಆಕೆಗೆ ಕಷ್ಟದ ಮಾತಲ್ಲ. ಚಾತುರ್ಮಾಸದಲ್ಲಿ ದಿನಕ್ಕೆ ಒಂದು ಊಟ ಮಾಡುವುದು ಆಕೆಯ ಪರಿಪಾಠ. ಇಷ್ಟಕ್ಕೇ ತೃಪ್ತಳಾಗುತ್ತಿರಲಿಲ್ಲ ಆಕೆ. ಯಾವುದೊ ಒಂದು ಚಾತುರ್ಮಾಸದಲ್ಲಿ ದಿನ ಬಿಟ್ಟು ದಿನ ಉಪವಾಸ ವ್ರತ ನಡೆಸಿದಳು. ಇನ್ನೊಂದು ಚಾತುರ್ಮಾಸದಲ್ಲಿ, ಸೂರ್ಯನನ್ನು ನೋಡದೆ ಆಹಾರ ತೆಗೆದುಕೊಳ್ಳಕೂಡದೆಂದು ವ್ರತ ಹಿಡಿದಳು. ಆಗ, ಸೂರ್ಯನು ಮೋಡಗಳಿಂದ ಇಣಿಕಿ ನೋಡುವುದನ್ನು ನಮ್ಮ ತಾಯಿಗೆ ತಿಳಿಸಲು ಮಕ್ಕಳಾದ ನಾವು ಆಕಾಶದ ಕಡೆಗೆ ದಿನವೆಲ್ಲ ನೆಟ್ಟ ನೋಟದಿಂದ ನೋಡುತಿದ್ದೆವು. ಮಳೆಗಾಲದ ಮಧ್ಯದಲ್ಲಿ ಸೂರ್ಯದರ್ಶನವಾಗುವುದು ಅಪರೂಪವೆಂಬುದನ್ನು ಎಲ್ಲರೂ ಬಲ್ಲರು. ಸೂರ್ಯನು ಫಕ್ಕನೆ ಕಾಣಿಸಿಕೊಂಡಾಗ ಅದನ್ನು ತಿಳಿಸಲು ನಾವು ಒಳಗೆ ನುಗ್ಗಿದುದು ನನಗೆ ನೆನಪಿದೆ. ಅವನನ್ನು ನೋಡಲು ಆಕೆಯೂ ಓಡಿ ಬರು

ತಿದ್ದಳು. ಆದರೆ ಅಷ್ಟರಲ್ಲಿ ಸೂರ್ಯ ಮೋಡಗಳಲ್ಲಿ ಮರೆಯಾಗುತಿದ್ದನು. ಇದರಿಂದ ಆಕೆಗೆ ಅಂದು ಊಟ ತಪ್ಪುತಿತ್ತು. ಆಗ ನಗುಮೊಗದಿಂದ ‘ಏನೂ ಚಿಂತೆ ಇಲ್ಲ. ಇಂದು ನಾನು ಊಟ ಮಾಡುವುದು ದೇವರಿಗೆ ಸರಿದೋರಲಿಲ್ಲ’ ಎಂದು ಹೇಳಿ ಕೆಲಸದಲ್ಲಿ ತೊಡಗುತಿದ್ದಳು.

ನಮ್ಮ ತಾಯಿ ಒಳ್ಳೇ ವ್ಯವಹಾರಚತುರೆ. ಸಂಸ್ಥಾನಕ್ಕೆ ಸಂಬಂಧಪಟ್ಟ ಎಷ್ಟೊ ಸಂಗತಿ ಆಕೆಗೆ ಗೊತ್ತಿದ್ದುವು. ಆಕೆಯ ಬುದ್ಧಿಕುಶಲತೆ ರಾಣೀವಾಸದವರಿಗೆ ಚೆನ್ನಾಗಿ ಗೊತ್ತಿದ್ದಿತು. ಚಿಕ್ಕ ಹುಡುಗನಾಗಿದ್ದುದರಿಂದ ಎಷ್ಟೋ ಸಲ ನಮ್ಮ ತಾಯಿಯೊಂದಿಗೆ ನಾನೂ ರಾಣೀವಾಸಕ್ಕೆ ಹೋಗುತಿದ್ದೆ. ಅಲ್ಲಿ ನಮ್ಮ ತಾಯಿಯೂ ಠಾಕೂರರ ತಾಯಿಯೂ ಮಹತ್ವದ ಎಷ್ಟೋ ಮಾತುಕತೆ ಆಡುತಿದ್ದುದು ನನಗೆ ಇನ್ನೂ ಚೆನ್ನಾಗಿ ನೆನಪಿದೆ.

ಈ ತಂದೆ ತಾಯಿಗಳ ಹೊಟ್ಟೆಯಲ್ಲಿ ನಾನು ಕಾಠೇವಾಡಿನ ಪೋರ್ ಬಂದರಿನಲ್ಲಿ ೧೮೬೯ನೆ ಅಕ್ಟೋಬರ್ ೨ರಲ್ಲಿ ಹುಟ್ಟಿದೆ. ಪೋರ್ ಬಂದರಿಗೆ ಸುದಾಮಪುರವೆಂಬ ಇನ್ನೊಂದು ಹೆಸರೂ ಇದೆ. ನನ್ನ ಬಾಲ್ಯ ಕಳೆದುದು ಪೋರ್ ಬಂದರಿನಲ್ಲಿ. ಅಲ್ಲಿ ಯಾವುದೊ ಸಾಲೆಗೆ ಹೋಗುತಿದ್ದುದು ಇನ್ನೂ ನೆನಪಿದೆ. ಮಗ್ಗಿ ಕೋಷ್ಟಕಗಳನ್ನು ತಿಳಿದುಕೊಳ್ಳುವುದು ನನಗೆ ಸ್ವಲ್ಪ ಕಷ್ಟವಾಯಿತು. ಜೊತೆಯ ಹುಡುಗರ ಸಹವಾಸದಿಂದ ನಮ್ಮ ಶಿಕ್ಷಕರಿಗೆ ಬಯ್ಯುವುದನ್ನು ಕಲಿತೆ. ಇದಕ್ಕೂ ಹೆಚ್ಚಿಗೆ ಈಗ ಏನೂ ನೆನಪಿಲ್ಲ. ಆಗ ನನ್ನ ಬುದ್ಧಿ ಮಂದವಾಗಿ, ನೆನಪಿನ ಶಕ್ತಿ ಅಪಕ್ವವಾಗಿ ಇದ್ದಿರಬೇಕೆಂದು ಈಗ ನನಗೆ ತೋರುತ್ತದೆ.

## ೨. ಶಾಲೆಯಲ್ಲಿ

ನಮ್ಮ ತಂದೆ ಪೋರ್ ಬಂದರನ್ನು ಬಿಟ್ಟು ರಾಜಾಸ್ಥಾನಿಕ ಕೋರ್ಟಿನ ಸದಸ್ಯರಾಗುವುದಕ್ಕಾಗಿ ರಾಜಕೋಟೆಗೆ ಬಂದರು. ಆಗ ನನಗೆ ಏಳು ವರುಷ ಇರಬಹುದು. ರಾಜಕೋಟೆಯಲ್ಲಿ ನಾನು ಒಂದು ಪ್ರಾಥಮಿಕ ಸಾಲೆಯನ್ನು ಸೇರಿದೆ. ಆಗ ನನಗೆ ಪಾಠ ಹೇಳಿಕೊಟ್ಟ ಶಿಕ್ಷಕರ ಹೆಸರು ಮುಂತಾದುವು ಚೆನ್ನಾಗಿ ನೆನಪಿವೆ. ಪೋರ್ ಬಂದರಿನಂತೆ ಇಲ್ಲಿಯೂ ನನ್ನ ಓದುಬರಹವನ್ನು

ಕುರಿತು ಹೇಳಬೇಕಾದುದೇನೂ ಇಲ್ಲ. ಆಗ ನಾನು ಜಾಣನೂ ಅಲ್ಲದ ದಡ್ಡನೂ ಅಲ್ಲದ ಸಾಮಾನ್ಯ ವಿದ್ಯಾರ್ಥಿ. ಈ ಸಾಲೆ ಮುಗಿದ ಬಳಿಕ ಊರ ಹೊರಗಿನ ಸಾಲೆಯಾಯಿತು. ಹನ್ನೆರಡನೆ ವಯಸ್ಸಿನಲ್ಲಿ ನಾನು ಕಲಿಯು ತಿದ್ದುದು ಹೈಸ್ಕೂಲಿನಲ್ಲಿ ಈ ಅಲ್ಪಾವಧಿಯಲ್ಲಿ ನಮ್ಮ ಶಿಕ್ಷಕರಲ್ಲಿ ಇಲ್ಲವೆ ಜೊತೆಯ ವಿದ್ಯಾರ್ಥಿಗಳಲ್ಲಿ ಎಂದಾದರೂ ಸುಳ್ಳು ಹೇಳಿದ್ದು ನನಗೆ ನೆನಪಿಲ್ಲ ಆಗ ನಾನು ತುಂಬಾ ನಾಚುಕುಳಿಯಾಗಿದ್ದೆ; ಯಾರೊಂದಿಗೂ ಸೇರುತ್ತಿರ ಲಿಲ್ಲ. ಪುಸ್ತಕ ಮತ್ತು ಪಾಠ ಇವೇ ನನ್ನ ಜೊತೆಗಾರರು. ಗಂಟೆ ಹೊಡೆ ದೊಡನೆ ಸಾಲೆಯಲ್ಲಿರುವುದು, ಸಾಲೆ ಮುಗಿದ ಕೂಡಲೇ ಮನೆಗೆ ಓಡು ವುದು; ಇದು ನನ್ನ ದಿನದ ರೂಢಿ. ಯಾರೊಡನೆಯೂ ಮಾತನಾಡುವ ತಾಳ್ಮೆ ನನ್ನಲ್ಲಿರಲಿಲ್ಲ; ಆದುದರಿಂದ ನೇರವಾಗಿ ಮನೆಗೆ ಓಡುತಿದ್ದೆ. ನನ್ನೊ ಡನೆ ಯಾರಾದರೂ ಪರಿಹಾಸ್ಯಮಾಡಬಹುದೆಂಬ ಹೆದರಿಕೆಯೂ ಇತ್ತು.

ಹೈಸ್ಕೂಲಿನಲ್ಲಿ ಮೊದಲನೆ ತರಗತಿಯಲ್ಲಿದ್ದಾಗ ನಡೆದ ಒಂದು ಘಟನೆ ಇಲ್ಲಿ ಹೇಳಲೇಬೇಕು. ಆಗ ಪರೀಕ್ಷಾ ದಿನಗಳು. ವಿದ್ಯಾಭ್ಯಾಸದ ಮೇಲ್ವಿ ಚಾರಕರಾದ ಶ್ರೀ. ಗೈಲ್ಸ್ ರವರು ಮೇಲ್ವಿಚಾರಣೆಗಾಗಿ ಬಂದಿದ್ದರು. ಅವರು ಶುದ್ಧವಾಗಿ ಬರೆಯಲು ಐದು ಇಂಗ್ಲಿಷ್ ಶಬ್ದಗಳನ್ನು ಕೊಟ್ಟಿದ್ದರು. ಕೆಟಲ್ (Kettle) ಎಂಬುದು ಅದರಲ್ಲಿ ಒಂದು. ನಾನು ಅದನ್ನು ತಪ್ಪಾಗಿ ಬರೆದಿದ್ದೆ. ಶಿಕ್ಷಕರು ತಮ್ಮ ಮೆಟ್ಟಿನ ತುದಿಯನ್ನು ನನ್ನ ಕಾಲಿಗೆ ತಗುಲಿಸಿ ತಪ್ಪನ್ನು ತಿಳಿಸಲು ಬಹಳವಾಗಿ ಯತ್ನಿಸಿದರು. ಅವರ ಸೂಚನೆಗೆ ನಾನು ಒಳಗಾಗ ಲಿಲ್ಲ. ಬದಿಯಲ್ಲಿದ್ದ ಹುಡುಗನ ಬರಹವನ್ನು ಕದ್ದು ನೋಡಬೇಕೆಂಬ ನಮ್ಮ ಉಪಾಧ್ಯಾಯರ ಸೂಚನೆ ನನಗೆ ಸರಿದೋರಲಿಲ್ಲ. ಏಕೆಂದರೆ ಉಪಾ-ಧ್ಯಾಯರು ಅಲ್ಲಿರುವುದು ಹುಡುಗರು ತಮ್ಮತಮ್ಮೊಳಗೆ 'ಕಾಪಿ' ಮಾಡಿ ಕೊಳ್ಳುವುದನ್ನು ತಡೆಯುವುದಕ್ಕೆ. ಇದರ ಪರಿಣಾಮ ಏನಾಯಿತೆಂದರೆ ನನ್ನ ಹೊರತಾಗಿ ಎಲ್ಲ ಹುಡುಗರೂ ಸರಿಯಾಗಿ ಬರೆದಿದ್ದರು. ಅಂದು ದಡ್ಡನೆನಿಸಿಕೊಂಡುದು ನಾನೊಬ್ಬನೆ. ಆಮೇಲೆ ನಮ್ಮ ಶಿಕ್ಷಕರು ನನ್ನ ಇಂತಹ ದಡ್ಡತನ ತೋರಿಸಲು ಯತ್ನಿಸಿದರು. ಆದರೆ ಅದು ವ್ಯರ್ಥ ವಾಯಿತು. ಕಾಪಿ ಮಾಡುವ ಆ ಕೆಲಸವನ್ನು ನಾನು ಕಲಿತುಕೊಳ್ಳಲಿಲ್ಲ.

ಹೀಗಿದ್ದರೂ ಈ ಸಂಗತಿಯಿಂದ ನಮ್ಮ ಶಿಕ್ಷಕರ ವಿಷಯದಲ್ಲಿ ನನಗಿದ್ದ ಗೌರವ ಎಳ್ಳಷ್ಟೂ ಕಡಿಮೆ ಆಗಲಿಲ್ಲ. ಹಿರಿಯರ ತಪ್ಪು ಎಣಿಸದಿರುವುದು

ನನ್ನ ಸ್ವಭಾವವಾಗಿತ್ತು. ಈ ಶಿಕ್ಷಕರ ಇನ್ನೂ ಹಲವು ದೋಷಗಳು ನನಗೆ ಆಮೇಲೆ ಕಂಡುಬಂದುವು. ಆದರೆ ನನ್ನ ಮನಸ್ಸಿನಲ್ಲಿ ಅವರನ್ನು ಕುರಿತ ಗೌರವ ಮೊದಲಿನಂತೆಯೆ ಇತ್ತು. ಏಕೆಂದರೆ ನನಗೆ ಗೊತ್ತಿದ್ದುದು ಹಿರಿಯರ ಅಪ್ಪಣೆ ಪಾಲಿಸುವುದು ಮಾತ್ರ; ಅವರ ನಡತೆ ಪರೀಕ್ಷಿಸುವುದಲ್ಲ.

ಸುಮಾರು ಇದೇ ಅವಧಿಯಲ್ಲಿ ನಡೆದ ಇನ್ನೆರಡು ಘಟನೆಗಳು ನನಗೆ ಚೆನ್ನಾಗಿ ನೆನಪಿವೆ. ಪಠ್ಯ ಪುಸ್ತಕಗಳ ಹೊರತು ಏನನ್ನು ಓದುವುದೂ ನನಗೆ ಸೇರುತ್ತಿರಲಿಲ್ಲ ಶಿಕ್ಷಕರನ್ನು ಮೋಸಗೊಳಿಸುವುದು, ಇಲ್ಲವೆ ಅವರಿಂದ ಬೈಗಳನ್ನು ತಿನ್ನುವುದು ಒಗ್ಗುತ್ತಿರಲಿಲ್ಲ. ಆದುದರಿಂದ ದಿನದ ಪಾಠಗಳನ್ನು ತಪ್ಪದೆ ಮಾಡುತಿದ್ದೆ. ಎಷ್ಟೋ ಸಲ ಪಾಠಗಳನ್ನು ಒಮ್ಮನಸ್ಸಿನಿಂದ ಮಾಡುತ್ತಿರಲಿಲ್ಲ. ಎಂದ ಮೇಲೆ ಬೇರೆ ಪುಸ್ತಕಗಳನ್ನು ಓದುವುದೆಂತು? ಆದರೆ ತಂದೆಯವರು ಕೊಂಡು ತಂದ ಒಂದು ಪುಸ್ತಕ ಅದೆಂತೊ ನನ್ನ ಕೈಸೇರಿತು. ಅದು “ಶ್ರವಣನ ಪಿತೃಭಕ್ತಿ” ಎಂಬ ನಾಟಕದ ಪುಸ್ತಕ, ಅದನ್ನು ಬಹಳ ಉತ್ಸಾಹದಿಂದಲೂ ಆಸಕ್ತಿಯಿಂದಲೂ ಓದಿದೆ. ಊರಿಂದೂರಿಗೆ ತಿರುಗುತ್ತಿರುವ ಗೊಂಬೆಯಾಟದ ಕೆಲವರು ಸುಮಾರು ಅದೇ ಹೊತ್ತಿಗೆ ನಮ್ಮ ಊರಿಗೆ ಬಂದರು. ಅವರ ಕೆಲವು ಆಟಗಳನ್ನು ನೋಡಲು ನಾನು ಹೋಗಿದ್ದೆ. ಶ್ರವಣನು ಕುರುಡರಾದ ತಾಯಿ ತಂದೆಗಳನ್ನು ಕಾವಡಿಯಲ್ಲಿ ಹೊತ್ತುಕೊಂಡು ತೀರ್ಥಯಾತ್ರೆಗಾಗಿ ಹೊರಟ ಆಟ ನಾನು ನೋಡಿದ ಆಟಗಳಲ್ಲಿ ಒಂದು. ಓದಿದ ಪುಸ್ತಕ, ನೋಡಿದ ಆಟ, ಇವೆರಡರಿಂದಲೂ ನನ್ನ ಮನಸ್ಸಿನಲ್ಲಿ ಅಚ್ಚಳಿಯುವ ಒಂದು ಭಾವನೆಯುಂಟಾಯಿತು ಆಗ ‘ಅಗೋ, ನೀನು ಅನುಸರಿಸಬೇಕಾದ ಮೇಲ್ಪಂಕ್ತಿ ಇಲ್ಲಿದೆ’ ಎಂದು ನನ್ನಲ್ಲಿ ನಾನೆ ಎಂದುಕೊಂಡೆ. ಶ್ರವಣನ ಸಾವಿನಿಂದ ಅವನ ತಂದೆ ತಾಯಿಗಳಿಗೆ ಒದಗಿದ ಶೋಕ ಈಗಲೂ ನನ್ನ ಮನಸ್ಸನ್ನು ಕಲಕುತ್ತಿದೆ. ಆಟದೊಳಗಿನ ಹೃದಯ-ಸ್ಪರ್ಶಿಯಾದ ಆ ಶೋಕರಾಗ ನನ್ನ ಮನಸ್ಸನ್ನು ಕರಗಿಸಿತು. ನಮ್ಮ ತಂದೆಯವರು ತಂದು ಕೊಟ್ಟಿದ್ದ ವಾದ್ಯದಲ್ಲಿ ಈ ರಾಗವನ್ನು ಬಾರಿಸಿ ಮನಸ್ಸನ್ನು ಸಮಾಧಾನಪಡಿಸಿಕೊಳ್ಳುತಿದ್ದೆ.

ಇಂತಹದೇ ಸಂಗತಿಯೊಂದು ಇನ್ನೊಮ್ಮೆ ನಡೆಯಿತು. ಸುಮಾರು ಇದೇ ಹೊತ್ತಿಗೆ ಅಲ್ಲಿಗೆ ನಾಟಕ ಮಂಡಲಿಯೊಂದು ಬಂದಿತು. ಅವರು ಆಡು

ತ್ತಲಿದ್ದ ಒಂದು ನಾಟಕ ನೋಡಲು ನಮ್ಮ ತಂದೆಯವರ ಒಪ್ಪಿಗೆ ಪಡೆದಿದ್ದೆ. ಅಂದು ನಾನು ನೋಡಿದ ನಾಟಕ—ಹರಿಶ್ಚಂದ್ರ. ಅದು ನನ್ನ ಮನಸ್ಸನ್ನು ಸೆರೆಹಿಡಿಯಿತು. ಎಷ್ಟು ಸಲ ನೋಡಿದರೂ ತೃಪ್ತಿಯಾಗಲಿಲ್ಲ. ಆದರೆ ಅದನ್ನು ನೋಡಲು ನನಗೆ ಒಪ್ಪಿಗೆ ಸಿಗುವುದಾದರೂ ಎಷ್ಟು ಸಲ? ಅದು ನನಗೆ ಹುಚ್ಚನ್ನೆ ಹಿಡಿಸಿಬಿಟ್ಟಿತು. 'ಹರಿಶ್ಚಂದ್ರನಂತೆ ಎಲ್ಲರೂ ಸತ್ಯಸಂಧ ರಾಗಬಾರದೇಕೆ?' ಇದು ಹಗಲಿರುಳೂ ನನ್ನಲ್ಲಿ ನಾನೇ ಕೇಳಿಕೊಂಡ ಪ್ರಶ್ನೆ. ಇದರಿಂದ ನನಗೆ, ಸತ್ಯವನ್ನನುಸರಿಸಬೇಕು ಮತ್ತು ಹರಿಶ್ಚಂದ್ರನಂತೆ ಎಲ್ಲ ಅಗ್ನಿಪರೀಕ್ಷೆಗಳನ್ನು ದಾಟಬೇಕು ಎಂದು ಪ್ರೇರೇಪಣೆಯಾಯಿತು. ಹರಿಶ್ಚಂದ್ರನ ಕತೆಯಲ್ಲಿ ನನಗೆ ಅಕ್ಷರಶಃ ನಂಬಿಗೆ ಇತ್ತು. ಆ ಎಲ್ಲ ಕತೆಯನ್ನು ನೆನಿಸಿಕೊಂಡು ಎಷ್ಟೋ ಸಲ ಕಣ್ಣೀರು ಸುರಿಸಿದ್ದೇನೆ. ಇಂದೇನೋ ನನಗೆ ಹರಿಶ್ಚಂದ್ರನೆಂಬ ವ್ಯಕ್ತಿ ನಿಜವಾಗಿಯೂ ಹುಟ್ಟಿರಲಾರನೆಂದು ತೋರುತ್ತದೆ. ಆದರೆ ನನ್ನ ಮಟ್ಟಿಗೆ ಹರಿಶ್ಚಂದ್ರ ಮತ್ತು ಶ್ರವಣರು ಚಿರಂಜೀವಿಗಳು. ಆ ನಾಟಕದ ಓದು ಈಗಲೂ ನನ್ನ ಮನಸ್ಸನ್ನು ಮುಟ್ಟಬಲ್ಲುದೆಂಬುದನ್ನು ಖಂಡಿತವಾಗಿ ಹೇಳಬಲ್ಲೆ.

ಹೈಸ್ಕೂಲಿನಲ್ಲಿ ನಾನು ದಡ್ಡನಾಗಿರಲಿಲ್ಲ. ನನ್ನ ಮೇಲೆ ಯಾವಾಗಲೂ ಶಿಕ್ಷಕರ ಪ್ರೀತಿ ಇತ್ತು. ಹುಡುಗರ ವಿದ್ಯೆ ಮತ್ತು ನಡತೆಯ ಸಂಬಂಧದಲ್ಲಿ ಪ್ರತಿ ವರುಷವೂ ಸಾಲೆಯಿಂದ ಪ್ರಗತಿ (Progress) ಪತ್ರಿಕೆಗಳು ಹೋಗುತಿದ್ದುವು. ಓದು ಬರಹದಲ್ಲಿ ಇಲ್ಲವೆ ನಡತೆಯಲ್ಲಿ ಕುಂದುಳ್ಳವನೆಂದು ನಾನು ಯಾವಾಗಲೂ ಹೇಳಿಸಿಕೊಳ್ಳಲಿಲ್ಲ. ಎರಡನೆ ತರಗತಿಯ ಪರೀಕ್ಷೆಯಲ್ಲಿ ಮೆಚ್ಚು ಪಡೆದುದೂ ಉಂಟು. ಐದನೆ ತರಗತಿಯಲ್ಲಿ ನಾಲ್ಕು ರೂಪಾಯಿಗಳ ಮತ್ತು ಆರನೆ ತರಗತಿಯಲ್ಲಿ ಹತ್ತು ರೂಪಾಯಿಗಳ ವೇತನವನ್ನು ದೊರಕಿಸಿದ್ದೆ. ಇದಕ್ಕೆ ಯೋಗ್ಯತೆಗಿಂತ ದೈವವೇ ಹೆಚ್ಚು ಕಾರಣವಿರಬೇಕು. ಏಕೆಂದರೆ ಈ ವೇತನ ಸೋರಠ ಜಿಲ್ಲೆಯ ವಿದ್ಯಾರ್ಥಿಗಳಿಗೆ ಮಾತ್ರ ಮೀಸಲಾಗಿರುತಿದ್ದಿತು. ಆಗಿನ ಕಾಲದಲ್ಲಿ ೪೦–೫೦ ಹುಡುಗರ ವರ್ಗದಲ್ಲಿ ಸಿಕ್ಕುವ ಆ ಜಿಲ್ಲೆಯ ವಿದ್ಯಾರ್ಥಿಗಳೆಷ್ಟು?

ನಾನು ಬಹಳ ಜಾಣನೆಂದು ತಿಳಿದುಕೊಂಡಿರಲಿಲ್ಲವೆಂಬುದು ನನಗೆ ನೆನಪಿದೆ. ಬಹುಮಾನ, ವೇತನಗಳನ್ನು ಪಡೆದಾಗ ನನಗೆ ಸೋಜಿಗವಾಗುತಿತ್ತು.

ಆದರೆ ನಡತೆಯ ವಿಷಯದಲ್ಲಿ ಮಾತ್ರ ಬಹಳ ಜಾಗರೂಕನಾಗಿದ್ದೆ. ನನ್ನ ಒಂದು ಸಣ್ಣ ತಪ್ಪೂ ಕಣ್ಣಿನಿಂದ ಹನಿ ಉದುರಿಸುತಿತ್ತು. ತಪ್ಪು ಮಾಡಿದಾಗ ಇಲ್ಲವೆ ತಪ್ಪುಮಾಡಿರಬಹುದೆಂದು ಶಿಕ್ಷಕರಿಗೆ ತೋರಿದಾಗ ಅವರು ನನ್ನನ್ನು ಬೈದರೆ ನನ್ನಿಂದ ಸಹಿಸಲಾಗುತ್ತಿರಲಿಲ್ಲ. ಒಮ್ಮೆ ನಾನು ಏಟು ತಿಂದುದು ನೆನಪಿದೆ. ಅಂದು ನನಗೆ ಬಹಳ ದುಃಖವಾಯಿತು—ಏಟು ತಿಂದುದಕ್ಕಲ್ಲ; ಶಿಕ್ಷೆಗೆ ತಕ್ಕವನಾದೆನಲ್ಲ ಎಂದು. ಆದುದರಿಂದ ಚೆನ್ನಾಗಿ ಅತ್ತುಬಿಟ್ಟೆ. ಇದು ನಡೆದುದು ನಾನು ಒಂದನೆ ಇಲ್ಲವೆ ಎರಡನೆ ತರಗತಿಯಲ್ಲಿದ್ದಾಗ. ಏಳನೆ ತರಗತಿಯಲ್ಲಿದ್ದಾಗಲೂ ಇಂತಹದೇ ಒಂದು ಸಂಗತಿ ನಡೆಯಿತು. ದೊರಾಬ್ಜಿ ಎದಲ್ಜಿ ಗಿಮಿ ಎಂಬುವವರು ಆಗ ನಮ್ಮ ಮುಖ್ಯೋಪಾಧ್ಯಾಯರು. ಅಚ್ಚುಕಟ್ಟು, ನಿಯಮಗಳಲ್ಲಿ ಇವರು ಖಂಡಿತವಾದಿಗಳು; ಆದರೂ ವಿದ್ಯಾರ್ಥಿಗಳಿಗೆ ಬೇಕಾದವರು. ನುರಿತ ಶಿಕ್ಷಕರು. ಕೆಲಸ ಬೊಗಸೆಗಳಲ್ಲಿ ಇವರಿಗೆ ಕ್ರಮ ಬೇಕು. ಮೇಲಿನ ವರ್ಗದ ವಿದ್ಯಾರ್ಥಿಗಳಿಗೆ ವ್ಯಾಯಾಮ ಕ್ರಿಕೆಟ್ಟುಗಳನ್ನು ಇವರು ಕಡ್ಡಾಯವಾಗಿ ಇಟ್ಟಿದ್ದರು. ಇವೆರಡಕ್ಕೂ ನನಗೂ ಎಣ್ಣೆ ಸೀಗೆಕಾಯಿಯ ಹಾಗೆ. ಕಡ್ಡಾಯದ ವಿಷಯಗಳಾಗುವವರೆಗೆ ನಾನು ಯಾವ ವ್ಯಾಯಾಮವನ್ನೂ—ಆಟಪಾಟಗಳಾಗಲಿ ಅಂಗಸಾಧನೆಯಾಗಲಿ— ಮಾಡಿದವನಲ್ಲ. ಹೀಗೆ ದೂರವಾಗಿರಲು ಸಂಕೋಚವೃತಿಯೂ ಒಂದು ಕಾರಣ. ನನ್ನ ಈ ನಡತೆ ಅಯೋಗ್ಯವಾದುದೆಂದು ನನಗೆ ಈಗ ತೋರುತ್ತದೆ. ಆಗ ನನ್ನಲ್ಲಿ ವಿದ್ಯಾಭ್ಯಾಸಕ್ಕೂ ವ್ಯಾಯಾಮಕ್ಕೂ ಸಂಬಂಧವಿಲ್ಲವೆಂಬ ತಪ್ಪು ತಿಳಿವಳಿಕೆ ಇತ್ತು. ವಿದ್ಯಾ-ಭ್ಯಾಸಕ್ರಮದಲ್ಲಿ ಬೌದ್ಧಿಕ ಶಿಕ್ಷಣಕ್ಕಿದ್ದಷ್ಟು ಮಹತ್ವ ಶಾರೀರಿಕ ಶಿಕ್ಷಣಕ್ಕೂ ಇರಬೇಕೆಂದು ಇಂದು ನನಗೆ ಚೆನ್ನಾಗಿ ತಿಳಿದಿದೆ.

ವ್ಯಾಯಾಮ ಮಾಡದಿದ್ದುದರಿಂದ ನನಗೆ ಹೆಚ್ಚು ನಷ್ಟವಾಗಲಿಲ್ಲವೆನ್ನಬಹುದು. ಬೈಲಿನಲ್ಲಿ ತಿರುಗಾಡುವುದು ಒಳಿತೆಂದು ನಾನು ಯಾವುದೊ ಪುಸ್ತಕದಲ್ಲಿ ಓದಿದ್ದೆ. ಇದು ಸರಿದೋರಿದ್ದರಿಂದ ತಿರುಗಾಟದ ರೂಢಿಯನ್ನಿಟ್ಟಿದ್ದೆ. ಇದು ಇನ್ನೂ ನಡೆದಿದೆ. ದಿನವೂ ಕೈಕೊಳ್ಳುವ ಈ ನಡಿಗೆಯಿಂದ ನನ್ನ ದೇಹಸ್ಥಿತಿ ಚೆನ್ನಾಗಿ ಸುಧಾರಿಸಿತು.

ವ್ಯಾಯಾಮದ ಅಲಕ್ಷ್ಯದಿಂದ ನಷ್ಟವಾಗಲಿಲ್ಲವೆಂಬುದು ನಿಜ. ಆದರೆ ನಾನು ಅಸಡ್ಡೆ ಮಾಡಿದ ಇನ್ನೊಂದು ವಿಷಯವೂ ಇದೆ. ಅದಕ್ಕೆ ಇಂದಿಗೂ

ನನಗೆ ಪ್ರಾಯಶ್ಚಿತ್ತ ಸಿಗುತ್ತಿದೆ. ಒಳ್ಳೇ ಬರಹಕ್ಕೂ ವಿದ್ಯಾಭ್ಯಾಸಕ್ಕೂ ಸಂಬಂಧವಿಲ್ಲವೆಂದು ಇಂಗ್ಲೆಂಡಿಗೆ ಹೋಗುವ ವರೆಗೂ ನಾನು ತಿಳಿದಿದ್ದೆ. ಈ ಅಭಿಪ್ರಾಯ ಎಂದು ತಲೆದೋರಿತೊ ನಾನರಿಯೆ; ಅಂಕುಡೊಂಕಾದ ಬರಹ ಸದೋಷ ವಿದ್ಯಾಭ್ಯಾಸದ ಕುರುಹೆಂಬುದು ಇತ್ತೀಚೆ ನನಗೆ ಮನ ವರಿಕೆಯಾಗಿದೆ. ಮುದ್ದಾದ ಕೈಬರಹ ಶಿಕ್ಷಣದೊಳಗಿನ ಮಹತ್ವದ ಅಂಶ ವೆಂಬುದನ್ನು ಯುವಕ ಯುವತಿಯರೆಲ್ಲರೂ ತಿಳಿಯಲಿ.

ನನ್ನ ವಿದ್ಯಾಭ್ಯಾಸದ ಕಾಲಕ್ಕೆ ಸಂಬಂಧಿಸಿದ ಮುಖ್ಯವಾದ ಇನ್ನೆರಡು ಸಂಗತಿಗಳಿವೆ. ನಮಗೆ ನಾಲ್ಕನೆ ತರಗತಿಯಿಂದಲೆ ಇಂಗ್ಲಿಷು ಬೋಧಭಾಷೆ ಯಾಯಿತು. ಇದರಿಂದ ದಿಕ್ಕು ತೋಚದಂತಾಯಿತು. ಭೂಮಿತಿ ನನಗೆ ತಲೆಬೇಸರ ಹಿಡಿಸುವ ವಿಷಯ. ಇಂಗ್ಲಿಷಿನಲ್ಲಿ ತಿಳಿಸುತಿದ್ದುದರಿಂದ ಅದು ಇನ್ನೂ ಕಷ್ಟವಾಯಿತು. ಶಿಕ್ಷಕರೇನೊ ಚೆನ್ನಾಗಿ ಪಾಠ ಹೇಳು ವವರೇ. ಆದರೆ ಅವರು ಹೇಳುವುದು ನನಗೆ ಅರ್ಥವಾಗುತ್ತಿರಲಿಲ್ಲ. ಅಂತೂ 'ಯುಕ್ಲಿಡ್ಡ'ನ ೧೩ನೆ ಸಿದ್ಧಾಂತದ ವರೆಗೆ ಮಹಾ ಸಾಹಸದಿಂದ ಬಂದುದಾಯಿತು. ರೇಖಾಗಣಿತ ಅತಿ ಸುಲಭವೆಂದು ಆಗ ನನಗೆ ಹೊಳೆ ಯಿತು. ಬುದ್ಧಿಶಕ್ತಿಯನ್ನು ಸರಿಯಾಗಿ ಸರಳವಾಗಿ ಉಪಯೋಗಿಸುವವರಿಗೆ ಆಯಾಸವಿಲ್ಲದೆ ತಿಳಿಯುವ ವಿಷಯವಿದು. ರೇಖಾಗಣಿತ ಅಂದಿನಿಂದ ನನಗೆ ಸುಲಭವಾಯಿತು; ಮನೋರಂಜಕವಾಯಿತು.

ಸಂಸ್ಕೃತ ಮಾತ್ರ ಇನ್ನೂ ಹೆಚ್ಚಿನ ತೊಂದರೆ ಕೊಟ್ಟಿತು. ಭೂಮಿತಿ ಯಲ್ಲಿ ಬಾಯಿಪಾಠ ಮಾಡಬೇಕಾದುದೇನೂ ಇರಲಿಲ್ಲ. ಸಂಸ್ಕೃತದಲ್ಲಾ ದರೋ ಪ್ರತಿ ಒಂದನ್ನೂ ಕಂಠಪಾಠ ಮಾಡಬೇಕೆಂದು ತೋರಿತು. ನಮಗೆ ಸಂಸ್ಕೃತ ಆರಂಭವಾಗುವುದೂ ನಾಲ್ಕನೆ ತರಗತಿಯಿಂದಲೇ. ಆರನೆ ವರ್ಗ ದಲ್ಲಿ ಹೆದರಿಬಿಟ್ಟೆ. ಸಂಸ್ಕೃತ ಶಿಕ್ಷಕರು ನಮ್ಮಿಂದ ಬಹಳ ಕೆಲಸವನ್ನಪೇ ಕ್ಷಿಸುವವರು, ವಿದ್ಯಾರ್ಥಿಗಳ ತಲೆಯಲ್ಲಿ ಒತ್ತಾಯದಿಂದ ಪಾಠಗಳನ್ನು ತುಂಬುವವರು ಎಂದು ತೋರಿತು. ಸಂಸ್ಕೃತ ಶಿಕ್ಷಕರಿಗೂ ಪಾರಸೀ ಶಿಕ್ಷಕ ರಿಗೂ ಒಂದು ತರಹದ ಮೇಲಾಟವೇ ನಡೆದಂತಿತ್ತು. ಪಾರಸೀ ಭಾಷೆ ಬಹಳ ಸರಳವಾದ ಭಾಷೆ; ಪಾರಸೀಶಿಕ್ಷಕರು ಮೃದು ಸ್ವಭಾವದವರು, ಬಹಳ ಒಳ್ಳೆಯವರು, ಹುಡುಗರ ಸಂಬಂಧದಲ್ಲಿ ಕನಿಕರವುಳ್ಳವರು ಎನ್ನುವುದು

ಹುಡುಗರಾದ ನಮಗೆಲ್ಲರಿಗೂ ತಿಳಿದ ವಿಷಯ. 'ಸುಲಭ' ವೆನ್ನುವುದು ನನ್ನನ್ನು ಮರುಳುಗೊಳಿಸಿತು. ಕೊನೆಗೆ ಒಂದು ದಿನ ನಾನು ಪಾರಸೀ ವರ್ಗದಲ್ಲಿ ಹೋಗಿ ಕುಳಿತೆ. ಇದರಿಂದ ಸಂಸ್ಕೃತ ಶಿಕ್ಷಕರಿಗೆ ಚಡಪಡಿಕೆಯಾಯಿತು. ಅವರು ನನ್ನನ್ನು ಹತ್ತಿರ ಕರೆದು 'ನಿಮ್ಮ ತಂದೆ ವೈಷ್ಣವರೆಂಬುದನ್ನು ಮರೆತೆಯಾ? ನಿನ್ನ ಧರ್ಮಕ್ಕೆ ಸಂಬಂಧಿಸಿದ ಭಾಷೆಯನ್ನು ಕಲಿಯುವುದಿಲ್ಲವೆ? ತಿಳಿಯದಿದ್ದುದನ್ನು ನನ್ನಿಂದ ತಿಳಿಯಬಾರದೆ? ನಿಮಗೆಲ್ಲರಿಗೂ ಸಾಧ್ಯವಾದಷ್ಟು ಹೆಚ್ಚು ಸಂಸ್ಕೃತ ಕಲಿಸಬೇಕೆಂದಿದ್ದೇನೆ. ಓದುತ್ತ ಹೋದಂತೆ ಅದರಲ್ಲಿ ಸ್ವಾರಸ್ಯ ಹೆಚ್ಚು. ಹೀಗೆ ಹೆದರದೆ ಸಂಸ್ಕೃತ ವರ್ಗಕ್ಕೆ ತಿರಿಗಿ ಬಾ' ಎಂದರು.

ಮಮತೆಯ ಈ ಮಾತು ನನ್ನ ಮನಸ್ಸನ್ನು ಸೆಳೆಯಿತು. ಶಿಕ್ಷಕರ ಕಕುಲಾತಿಗೆ ನಾನು ಒಳಗಾಗಲೇ ಬೇಕಾಯಿತು. ಇಂದಿಗೂ ಶ್ರೀ. ಕೃಷ್ಣಶಂಕರ ಪಾಂಡ್ಯರ ಉಪಕಾರ ಮರೆಯುವಂತಿಲ್ಲ. ಏಕೆಂದರೆ ಆಗ ಕಲಿತ ಅಲ್ಪಸ್ವಲ್ಪ ಸಂಸ್ಕೃತವೂ ಬಾರದಿರುತಿದ್ದರೆ ನಮ್ಮ ಪವಿತ್ರ ಗ್ರಂಥಗಳಲ್ಲಿ ಆಸಕ್ತಿ ಹುಟ್ಟುವುದೇ ಕಷ್ಟವಾಗುತಿದ್ದಿತು. ಅದನ್ನು ಇನ್ನೂ ಚೆನ್ನಾಗಿ ಕಲಿಯದಿದ್ದುದಕ್ಕೆ ಈಗ ನಾನು ಬಹಳವಾಗಿ ಮರುಗುತಿದ್ದೇನೆ. ಏಕೆಂದರೆ ಪ್ರತಿಯೊಬ್ಬ ಹಿಂದೂ ಹುಡುಗನೂ ಹುಡಿಗೆಯೂ ಸಂಸ್ಕೃತವನ್ನು ಚೆನ್ನಾಗಿ ಬಲ್ಲವರಾಗಬೇಕೆಂದು ಮನಗಂಡಿದ್ದೇನೆ.

ಹಿಂದುಸ್ತಾನದ ಉಚ್ಚ ಶಿಕ್ಷಣದ ಪಾಠಕ್ರಮದಲ್ಲಿ ಹಿಂದಿ, ಸಂಸ್ಕೃತ, ಪಾರಸಿ, ಅರಬ್ಬಿ ಮತ್ತು ಇಂಗ್ಲಿಷ್ ಇಷ್ಟು ಭಾಷೆಗಳಿಗೂ ಸ್ಥಾನವಿರಬೇಕು. ಪ್ರಾಂತೀಯ ಭಾಷೆ ಕಲಿಸುವ ಭಾಷೆಯಾಗಬೇಕು. ಇದು ನನ್ನ ಈಗಿನ ಅಭಿಪ್ರಾಯ ಭಾಷೆಗಳ ಈ ದೊಡ್ಡ ಪಟ್ಟಿಯಿಂದ ಯಾರೂ ಬೆದರಬೇಕಾಗಿಲ್ಲ. ನಮ್ಮ ವಿದ್ಯಾಭ್ಯಾಸ ಹೆಚ್ಚು ವ್ಯವಸ್ಥಿತವಾಗಿದ್ದರೆ, ಮತ್ತು ಪಾಠಗಳನ್ನು ಪರಭಾಷೆಯ ಮೂಲಕ ಕಲಿಯುವ ಹೊರೆ ಇಲ್ಲದಿದ್ದರೆ, ಹಲವು ಭಾಷೆಗಳನ್ನು ಕಲಿಯಲು ಬೇಸರವಾಗುವುದಿಲ್ಲ; ಮನರಂಜನೆಯಾಗುತ್ತದೆ ಒಂದು ಭಾಷೆಯ ಚೆನ್ನಾದ ಅಭ್ಯಾಸ ಹಲವು ಭಾಷೆಗಳ ಅಭ್ಯಾಸವನ್ನು ಹಗುರು ಮಾಡುತ್ತದೆ.

ವಾಸ್ತವಿಕವಾಗಿ ಹಿಂದಿ, ಗುಜರಾತಿ ಮತ್ತು ಸಂಸ್ಕೃತ ಒಂದೇ ಭಾಷೆ. ಅದರಂತೆ ಪಾರಸಿ ಮತ್ತು ಅರಬ್ಬೀ ಭಾಷೆಗಳೂ ಒಂದೇ. ಭಾಷೆಗಳ ಬಳಗ

ದಲ್ಲಿ ಆರ್ಯ ಭಾಷೆಗಳ ಗುಂಪಿಗೆ ಪಾರಸಿ, ಹಿಬ್ರುಭಾಷೆಯ ಗುಂಪಿಗೆ ಅರಬ್ಬಿ ಸೇರುತ್ತವೆ. ಹೀಗಿದ್ದರೂ ಇವೆರಡೂ ಭಾಷೆಗಳ ಸಂಬಂಧ ಹತ್ತಿರದ್ದು. ಇವೆರಡೂ ಭಾಷೆಗಳ ಪೂರ್ಣ ವಿಕಾಸವಾದುದು ಮುಸಲ್ಮಾನ ಧರ್ಮದ ಉದಯದಿಂದ. ಉರ್ದು ಬೇರೆಯಾದ ಭಾಷೆಯೆಂದು ನಾನು ತಿಳಿದಿಲ್ಲ. ಏಕೆಂದರೆ ಹಿಂದೀ ವ್ಯಾಕರಣವೇ ಅದರ ವ್ಯಾಕರಣ. ಅದರ ಶಬ್ದ-ಸಂಪತ್ತು ಪಾರಸೀ ಅರಬ್ಬೀ ಭಾಷೆಗಳಿಂದ ಬಂದದ್ದು. ಗುಜರಾತಿ, ಹಿಂದಿ, ಬಂಗಾಲಿ, ಅಥವಾ ಮರಾಠಿಯನ್ನು ಚೆನ್ನಾಗಿ ಕಲಿಯಬೇಕೆನ್ನುವವರು ಸಂಸ್ಕೃತ ಬಲ್ಲವರಾಗಿರಬೇಕು. ಅದರಂತೆ ಉರ್ದು ಚೆನ್ನಾಗಿ ಕಲಿಯಬೇಕೆನ್ನುವವರು ಪಾರಸಿ ಅರಬ್ಬಿಯನ್ನು ಕಲಿಯಬೇಕಾದುದು ಆವಶ್ಯಕ.

## ೩. ಮದುವೆ ಮತ್ತು ಮಾಂಸಭಕ್ಷಣ

ಹದಿಮೂರನೆ ವಯಸ್ಸಿನಲ್ಲಿ ನನ್ನ ಮದುವೆಯಾಯಿತು. ಇಷ್ಟು ಚಿಕ್ಕವಯಸ್ಸಿನಲ್ಲಿ ಮದುವೆಯಾಯಿತೆಂದು ಹೇಳಲು ನನಗೆ ವಿಷಾದವಾಗುತ್ತದೆ. ಆದರೂ ಹೇಳದಿರುವಂತಿಲ್ಲ. ಇದೇ ವಯಸ್ಸಿನ ಅನೇಕ ಹುಡುಗರು ಈಗ ನನ್ನ ಪಾಲನೆಯಲ್ಲಿದ್ದಾರೆ. ಅವರನ್ನು ನೋಡಿ ಈ ಮದುವೆಯನ್ನು ನೆನೆದುಕೊಂಡರೆ ನನ್ನ ವಿಷಯದಲ್ಲಿ ನನಗೇ ಕನಿಕರ; ನನ್ನ ಪಾಡು ಈ ಚಿಕ್ಕ ಮಕ್ಕಳಿಗೆ ಬರಲಿಲ್ಲವಲ್ಲ ಎಂದು ಸಂತೋಷ. ತೀರ ಚಿಕ್ಕ ವಯಸ್ಸಿನ ಮದುವೆಗಳಿಗೆ ನೈತಿಕ ಆಧಾರವೇನೂ ಕಾಣೆ. ಮದುವೆಯೂ ಶಿಕ್ಷಣವೂ ಕೂಡಿ ನಡೆಯುವುದು ನಮ್ಮ ಈಗಿನ ಹಿಂದೂ ಸಮಾಜದಲ್ಲಿ ಮಾತ್ರ.

ಸುಮಾರು ಇದೇ ಕಾಲಕ್ಕೆ ನನಗೆ ಕೆಟ್ಟ ಸಹವಾಸ ಜೊತೆಗೂಡಿತು. ಈ ವಿಷಾದಕರ ಘಟನೆಯನ್ನೂ ವ್ಯಸನಪೂರ್ವಕವಾಗಿ ನಾನು ಬಣ್ಣಿಸಬೇಕು.

ನನ್ನ ಈ ಸಂಗಡಿಗ ಮೊಟ್ಟಮೊದಲು ನನ್ನ ಅಣ್ಣನ ಜೊತೆಗಾರ. ಅವರಿಬ್ಬರೂ ಒಂದೇ ತರಗತಿಯಲ್ಲಿ ಓದುತಿದ್ದವರು. ಈ ಗೆಳೆಯನ ಕುಂದುಕೊರತೆಗಳನ್ನು ನಾನು ಅರಿತಿದ್ದೆ. ಆದರೆ ಇವನು ಒಳ್ಳೇ ಪ್ರಾಮಾಣಿಕ ಸ್ನೇಹಿತನೆಂದು ತಿಳಿದಿದ್ದೆ. ಇವನ ವಿಷಯದಲ್ಲಿ ನನ್ನ ಹೆಂಡತಿ, ತಾಯಿ,

ಇದಲ್ಲದೆ ಹಿರಿಯ ಅಣ್ಣನು ಕೂಡ ನನ್ನನ್ನು ಎಚ್ಚರಿಸಿದ್ದರು. ಹೆಂಡತಿಯ ಸೂಚನೆಯನ್ನು ಯಾರಾದರೂ ಲಕ್ಷಿಸುವರೆ? ಆದರೆ ತಾಯಿ ಮತ್ತು ಅಣ್ಣನ ವಿರುದ್ಧ ಹೋಗುವಷ್ಟು ಧೈರ್ಯ ನನ್ನಲ್ಲಿರಲಿಲ್ಲ. ಆದರೂ 'ನನಗೆ ಅವನ ದುರ್ಗುಣಗಳು ಗೊತ್ತು. ಅವನಲ್ಲಿ ಒಳ್ಳೆಯ ಗುಣಗಳೂ ಇವೆ. ಇದಲ್ಲದೆ ಅವನನ್ನು ಹಾದಿಗೆ ತರುವ ಯತ್ನದಲ್ಲಿದ್ದೇನೆ' ಎಂದು ಅವರನ್ನು ಸಮಾಧಾನ ಪಡಿಸಿದೆ.

ಇದರಿಂದ ಅವರಿಗೆ ತೃಪ್ತಿಯಾದಂತೆ ಕಾಣೆ. ಆದರೂ ಅವರು ನನ್ನ ಗೊಡವೆಗೆ ಬರದೆ ಸುಮ್ಮನಾಗಿ ಬಿಟ್ಟರು.

ನಾನು ಮೋಸ ಹೋದುದು ಆಮೇಲೆ ನನಗೆ ತಿಳಿಯಿತು. ದುರ್ಮಾರ್ಗಿಯನ್ನು ತಿದ್ದಬೇಕೆನ್ನುವವನು ಅವನೊಂದಿಗೆ ಬಹಳ ಸಲಿಗೆ ಇಟ್ಟು ಪ್ರಯೋಜನವಿಲ್ಲ. ಆತ್ಮಿಕ ಸಾಮರಸ್ಯವೇ ನಿಜವಾದ ಸ್ನೇಹ. ಇಂತಹ ಗೆಳೆತನ ಈ ಪ್ರಪಂಚದಲ್ಲಿ ದೊರಕುವುದು ಅಪೂರ್ವ. ಸಮಾನ ಗುಣದವರಲ್ಲಿ ಮಾತ್ರ ಇಂತಹ ಗೆಳೆತನ ಬಹಳ ದಿನ ಬಾಳುವುದು. ಸ್ನೇಹಿತರಲ್ಲಿ ಒಬ್ಬನ ಸ್ವಭಾವದ ಪ್ರತಿಕ್ರಿಯೆ ಇನ್ನೊಬ್ಬನಲ್ಲಿ ಆಗುವುದು ಸ್ವಾಭಾವಿಕ. ಆದುದರಿಂದ ಗೆಳೆತನ ಸ್ವಭಾವವನ್ನು ತಿದ್ದಲು ಸಮರ್ಥವಾಗುವುದು ತೀರ ಅಪರೂಪ. ವಿರುದ್ಧ ಸ್ವಭಾವದ ಗೆಳೆತನ ಕೂಡದೆಂದೇ ನನ್ನ ಅಭಿಪ್ರಾಯ. ಏಕೆಂದರೆ ಸದ್ಗುಣಕ್ಕಿಂತ ದುರ್ಗುಣಗಳಿಗೆ ಬೇಗನೆ ಒಲಿಯುವುದು ಮನುಷ್ಯಸ್ವಭಾವ. ಇದಲ್ಲದೆ ದೇವರ ಒಲವನ್ನಪೇಕ್ಷಿಸುವವನು ಯಾರ ಸ್ನೇಹವನ್ನೂ ಬಯಸಕೂಡದು; ಇಲ್ಲವೆ ಇಡೀ ಪ್ರಪಂಚಕ್ಕೇ ತನ್ನ ಸ್ನೇಹವನ್ನೊಪ್ಪಿಸಬೇಕು. ಈ ನನ್ನ ಅಭಿಪ್ರಾಯ ತಪ್ಪಾಗಿರಬಹುದು. ಅಂತೂ ಗಾಢಸ್ನೇಹದ ನನ್ನ ಪ್ರಯತ್ನ ತಲೆಕೆಳಗಾಯಿತು.

ಮೊಟ್ಟಮೊದಲು ನನಗೆ ಈ ಗೆಳೆಯನ ಪರಿಚಯವಾದಾಗ ರಾಜಕೋಟೆಯಲ್ಲಿ '. ಸುಧಾರಣಾ' ಪಂಥದ ಗಾಳಿ ಬೀಸುತಿದ್ದಿತು. ನಮ್ಮ ಅನೇಕ ಶಿಕ್ಷಕರು ಹೆಂಡ ಮಾಂಸಗಳನ್ನು ತಿನ್ನುತ್ತಿರುವರೆಂದು ಈ ಗೆಳೆಯ ನನಗೆ ಹೇಳಿದ. ರಾಜಕೋಟೆಯ ಹೆಸರಾದ ಎಷ್ಟೋ ಜನರು ಇದೇ ಗುಂಪಿನವರೆಂದು ಅವನ ಹೇಳಿಕೆ. ಎಷ್ಟೋ ಹೈಸ್ಕೂಲು ವಿದ್ಯಾರ್ಥಿಗಳ ಹೆಸರೂ ಇದರಲ್ಲಿತ್ತು.

ಇದರಿಂದ ನನಗೆ ಅಚ್ಚರಿಯೊಂದಿಗೆ ಕಳವಳವೂ ಆಯಿತು. ಜನರ

ಈ ನಡತೆಗೆ ಕಾರಣವೇನೆಂದು ಗೆಳೆಯನನ್ನು ಕೇಳಿದೆ. ಅದಕ್ಕೆ ಅವನು ಕೊಟ್ಟ ಕಾರಣ ಹೀಗೆ:— ಹಿಂದೀಯರಾದ ನಾವು ಬಲಹೀನರು; ಮಾಂಸ ತಿನ್ನದಿರುವುದು ಇದಕ್ಕೆ ಮುಖ್ಯ ಕಾರಣ. ಇಂಗ್ಲಿಷರು ನಮ್ಮನ್ನು ಆಳು ತ್ತಿರುವ ಕಾರಣವಾದರೂ ಏನು? ಮಾಂಸ ತಿನ್ನುವುದು. ನಾನು ಒಳ್ಳೇ ಗಟ್ಟಿಗ; ಚೆನ್ನಾದ ಓಟಗಾರ. ಇದನ್ನು ನೀನು ಬಲ್ಲೆಯಷ್ಟೆ? ಇದು ಮಾಂಸದ ಪರಿಣಾಮ. ಮಾಂಸಾಹಾರಿಗಳಿಗೆ ಕುರು ಏಳುವುದಿಲ್ಲ, ಬಾವು ಬರುವುದಿಲ್ಲ; ಬಂದರೂ ಬೇಗ ಗುಣವಾಗುತ್ತದೆ. ಮಾಂಸ ತಿನ್ನುವ ನಮ್ಮ ಶಿಕ್ಷಕರೂ ಉಳಿದ ದೊಡ್ಡ ಮನುಷ್ಯರೂ ಬುದ್ಧಿಗೇಡಿಗಳಲ್ಲ. ಅದರ ಲಾಭ ಅವರಿಗೆ ಚೆನ್ನಾಗಿ ಗೊತ್ತು. ನೀನೂ ಅದರಂತೆ ಮಾಡಿ ನೋಡು. ಒಮ್ಮೆ ಯತ್ನಿಸುವುದರಿಂದ ಆಗುವ ನಷ್ಟವೇನು? ಎಷ್ಟು ಬಲ ಬರುವುದೆಂಬುದನ್ನು ಒಮ್ಮೆ ಪ್ರಯತ್ನಿಸಿ ನೋಡು.'

ಇವೆಲ್ಲ ಒಂದೇ ಸಲ ಹೇಳಿದ ಮಾತುಗಳಲ್ಲ. ಅವನು ಆಗಿಂದಾಗ, ವಿವರವಾಗಿ, ಒಳ್ಳೆ ಕೌಶಲ್ಯದಿಂದ ಹೇಳಿದ ಮಾತುಗಳ ಸಾರವಿದು. ನನ್ನ ಚಿಕ್ಕ ಅಣ್ಣ ಈ ಮೊದಲೇ ಅವನ ಬಲೆಗೆ ಬಿದ್ದಿದ್ದ. ಆದುದರಿಂದ ಸ್ನೇಹಿತನ ಮಾತಿಗೆ ಅವನ ಬೆಂಬಲವಿರಲೇಬೇಕಷ್ಟೆ? ನನ್ನ ಅಣ್ಣ ಮತ್ತು ಈ ಸ್ನೇಹಿತ ನೆದುರು ನಾನು ಬಡಕಲು. ನನಗಿಂತ ಇವರಿಬ್ಬರೂ ಗಟ್ಟಿಗರು, ಧೈರ್ಯ ಶಾಲಿಗಳು; ಬಲವಾದ ಮೈಕಟ್ಟಿನವರು. ಈ ಗೆಳೆಯನ ಬಾಯ್ಬಡಕತನಕ್ಕೆ ನಾನು ಮರುಳಾದೆ. ಇವನು ಅತಿ ವೇಗವಾಗಿ ಬಹಳ ದೂರ ಓಡಬಲ್ಲ ಓಟಗಾರ. ಎತ್ತರ ಹಾರುವುದರಲ್ಲಿ ಮತ್ತು ಉದ್ದ ಹಾರುವುದರಲ್ಲಿ ಗಟ್ಟಿಗ. ಎಂತಹ ದೇಹಶ್ರಮವನ್ನೂ ತಾಳಿಕೊಳ್ಳುತಿದ್ದ. ತನ್ನ ಪರಾಕ್ರಮವನ್ನು ಆಗಿಂದಾಗ ಕೊಚ್ಚಿಕೊಳ್ಳುತ್ತಲೂ ಇದ್ದ. ಮನುಷ್ಯನಿಗೆ ತನ್ನಲ್ಲಿಲ್ಲದ ಶಕ್ತಿ ಇತರರಲ್ಲಿ ಕಂಡರೆ ಆಶ್ಚರ್ಯ. ನನ್ನ ಸ್ಥಿತಿಯಾದುದೂ ಅದರಂತೆ. ಅವ ನಂತೆ ಆಗಬೇಕೆಂಬ ಬಲವತ್ತರವಾದ ಆಸೆ ನನ್ನನ್ನು ಕೆಣಕತೊಡಗಿತು. ಓಟದಲ್ಲಿಯೂ ಹಾರಿಕೆಯಲ್ಲಿಯೂ ನಾನು ಅಷ್ಟಕಷ್ಟೆ. ಅವನಂತೆ ನಾನೂ ಏಕೆ ಗಟ್ಟಿಗನಾಗಬಾರದು?

ನಾನು ಮಹಾ ಪುಕ್ಕ. ಹಾವು, ಪಿಶಾಚಿ, ಕಳ್ಳರಿಗೆ ಹೆದರುತಿದ್ದೆ. ರಾತ್ರಿಯಲ್ಲಿ ಹೊರಗೆ ಇಣಿಕಿ ನೋಡುವ ಧೈರ್ಯವಿರಲಿಲ್ಲ. ಕತ್ತಲೆ

ಯೆಂದರೆ ವೈನಡುಕ. ದೀಪವಿಲ್ಲದೆ ಕತ್ತಲೆಯಲ್ಲಿ ಮಲಗುವುದೆ ಅಸಾಧ್ಯ. ನನಗೆ ಒಂದೆಡೆಯಿಂದ ಹಾವು, ಇನ್ನೊಂದೆಡೆಯಿಂದ ಭೂತ, ಮತ್ತೊಂದೆಡೆ ಯಿಂದ ಕಳ್ಳರು ಬರುತ್ತಿರುವಂತೆ ತೋರುತಿತ್ತು. ಆದುದರಿಂದ ದೀಪವಿಲ್ಲದೆ ಮಲಗುತ್ತಿರಲಿಲ್ಲ. ಹತ್ತಿರವೇ ಮಲಗಿರುವ ಹೆಂಡತಿಗೆ ಈ ಹೆದರಿಕೆಯನ್ನು ಹೇಗೆ ಹೇಳುವುದು? ಅವಳು, ಇದೀಗ ತಾರುಣ್ಯದಲ್ಲಿ ಹೆಜ್ಜೆ ಇಡುತ್ತಿರುವ ಎಳೆಯ ಹುಡಿಗೆ ನನಗಿಂತ ಎದೆಗಾರ್ತಿ. ಆದ್ದರಿಂದ ನನ್ನನ್ನು ಕಂಡರೆ ನನಗೇ ನಾಚಿಕೆ. ಆಕೆ ಪಿಶಾಚಿಗೂ ಹೆದರುತ್ತಿರಲಿಲ್ಲ; ಹಾವಿಗೂ ಹೆದರುತ್ತಿರ ಲಿಲ್ಲ. ಕತ್ತಲೆಯಲ್ಲಿ ಬೇಕಾದಲ್ಲಿ ಹೋಗಬಲ್ಲಳು. ನನ್ನ ಈ ಎಲ್ಲ ಕೊರತೆ ಗಳು ಆ ಗೆಳೆಯನಿಗೆ ಗೊತ್ತಿದ್ದುವು. ತಾನು ಹಾವನ್ನು ಹಿಡಿಯಬಲ್ಲನಂತೆ; ಕಳ್ಳರ ಹೆದರಿಕೆ ಅವನಿಗಿಲ್ಲವಂತೆ; ಪಿಶಾಚಿಗಳಂತೂ ಪ್ರಪಂಚದಲ್ಲಿಯೆ ಇಲ್ಲ ವಂತೆ. ಇದೆಲ್ಲವೂ ಮಾಂಸಾಹಾರದ ಪರಿಣಾಮವೆಂಬುದು ಖಂಡಿತ!

ನರ್ಮದನೆಂಬ ಗುಜರಾತಿ ಕವಿಯ ಲಾವಣಿಯೊಂದು ವಿದ್ಯಾರ್ಥಿ ಗಳಾದ ನಮ್ಮೆಲ್ಲರ ಬಾಯಲ್ಲಿತ್ತು. ಅದರ ಸಾರಾಂಶ ಹೀಗಿದೆ:—

"ಇಂಗ್ಲಿಷರವನು ಮಾಂಸ ತಿಂದು ಐದು ಮೊಳ ಎತ್ತರ ಬೆಳೆದು ಒಳ್ಳೇ ದಾರ್ಢ್ಯವುಳ್ಳವನು. ಆದುದರಿಂದಲೇ ಹಿಂದೀಯರನ್ನು ಆಳುತ್ತಿರು ವುದು."

ನನ್ನ ಮನಸ್ಸಿನ ಮೇಲೆ ಈ ಎಲ್ಲ ಮಾತುಗಳ ಪರಿಣಾಮವಾಯಿತು. ನಾನು ಮನಸೋತೆ. ಮಾಂಸಾಹಾರ ಒಳ್ಳೆತಾದುದು; ಅದು ಗಟ್ಟಿಗನನ್ನಾಗಿ ಮಾಡುವುದು: ಇಡೀ ರಾಷ್ಟ್ರವೇ ಮಾಂಸಾಹಾರಿಯಾದರೆ ಇಂಗ್ಲಿಷರನ್ನು ಸೋಲಿಸುವುದು ಕಷ್ಟವೆ? ಎಂದು ನನಗೆ ತೋರಿತು.

ಮಾಂಸಾಹಾರ ಆರಂಭಿಸಲಿಕ್ಕೆ ಒಂದು ಒಳ್ಳೇ ದಿನ ಗೊತ್ತಾಯಿತು. ನನ್ನ ತಂದೆ ತಾಯಿಗಳು ಕಡು ವೈಷ್ಣವರು. ಆದುದರಿಂದ ಈ ಕೆಲಸ ಯಾರಿಗೂ ಗೊತ್ತಾಗದಂತೆ ನಡೆಯಬೇಕು. ನನಗೋ ತಂದೆ ತಾಯಿಗಳಲ್ಲಿ ಹೆಚ್ಚಿನ ಭಕ್ತಿ. ನಾನು ಮಾಂಸ ಮೆದ್ದ ಸಂಗತಿ ಅವರನ್ನು ಕಸಿವಿಸಿಗೊಳಿ- ಸುವುದೆಂದು ನನಗೆ ಗೊತ್ತು. ಇದಲ್ಲದೆ ಸತ್ಯವನ್ನು ಕುರಿತ ಪ್ರೀತಿಯೂ ನನ್ನನ್ನು ಎಚ್ಚರಿಸಿತು. ನಾನು ಮಾಂಸ ಭಕ್ಷಣ ಮಾಡಿದ್ದರೆ ತಂದೆತಾಯಿ ಗಳನ್ನು ಮೋಸಗೊಳಿಸಿದಂತಾಗುತಿತ್ತು. ಈ ಮಾತು ಆಗ ನನಗೆ ತಿಳಿದಿರ ಲಿಲ್ಲವೆಂದು ಹೇಳಲಾರೆ. ಆದರೆ ನನ್ನ ಮನಸ್ಸು ಆಗ 'ಸುಧಾರಣೆ'ಯ

ಕಡೆಗೆ ಒಲಿದಿತ್ತು. ನನಗೆ ಮಾಂಸಾಹಾರದಿಂದ ನಾಲಿಗೆ ತಣಿಸಬೇಕೆಂಬ ಬಯಕೆ ಇರಲಿಲ್ಲ. ಅದು ರುಚಿಯಾದುದು ಅಹುದೊ ಅಲ್ಲವೊ ಯಾರಿಗೆ ಗೊತ್ತು? ಗಟ್ಟಿಗನಾಗಬೇಕು, ಧೈರ್ಯಶಾಲಿಯಾಗಬೇಕು, ನನ್ನ ದೇಶ ಬಾಂಧವರೂ ಹಾಗೆ ಆಗಬೇಕು; ಇಂಗ್ಲಿಷರನ್ನು ಸೋಲಿಸಿ ದೇಶಕ್ಕೆ ಸ್ವಾತಂತ್ರ್ಯ ತರಬೇಕು; ಇದುವೇ ನನ್ನ ಆಗಿನ ಬಯಕೆ. ನಾನು ಸ್ವರಾಜ್ಯ ವೆಂಬ ಶಬ್ದವನ್ನು ಇನ್ನೂ ಕೇಳಿರಲಿಲ್ಲ. ಆದರೆ ಸ್ವಾತಂತ್ರ್ಯವೆಂದರೇನೆಂದು ನನಗೆ ಗೊತ್ತಿತ್ತು. 'ಸುಧಾರಣೆ'ಯ ಹುಚ್ಚಿನಿಂದ ನಾನು ಕುರುಡನಾಗಿದ್ದೆ. ತಂದೆತಾಯಿಗಳಿಗೆ ಗೊತ್ತಾಗದಂತೆ ಈ ಕೆಲಸ ಮಾಡುವುದರಿಂದ ಸತ್ಯ ಬಾಹಿರನಾಗಲಿಲ್ಲವಲ್ಲ? ಈ ಯೋಚನೆಯಿಂದ ಗುಟ್ಟನ್ನು ಮರೆಹೊಕ್ಕು ನನಗೆ ನಾನೇ ಮೋಸಹೋದೆ.

ಅಂತೂ ನಿಶ್ಚಿತ ದಿನ ಬಂದೇ ಬಿಟ್ಟಿತು. ನನ್ನ ಆಗಿನ ಸ್ಥಿತಿಯನ್ನು ಸರಿಯಾಗಿ ಬಣ್ಣಿಸುವುದು ಸ್ವಲ್ಪ ಕಷ್ಟ. ಇತ್ತ 'ಸುಧಾರಣೆ'ಯ ಉತ್ಸಾಹ ಮತ್ತು ಜೀವನದಲ್ಲಿ ಹೊಸ ಹಾದಿ ಕಂಡುಕೊಳ್ಳುವುದರಲ್ಲಿರುವ ಹೊಸತನ; ಅತ್ತ ಇಷ್ಟು ಉತ್ಸಾಹದಿಂದ ಕೈಕೊಂಡ ಈ ಕೆಲಸವನ್ನು ಕಳ್ಳತನದಿಂದ ಮಾಡುತ್ತಿರುವುದಕ್ಕಾಗಿ ನಾಚಿಕೆ. ಇದರಲ್ಲಿ ಪ್ರಧಾನವಾಗಿದ್ದುದು ಯಾವು ದೆಂದು ನಾನರಿಯೆ. ನದಿಯ ದಡದಲ್ಲಿ ದೂರವಾದ, ಶಾಂತವಾದ ಒಂದು ಸ್ಥಳಕ್ಕೆ ನಾವಿಬ್ಬರೂ ಹೋದೆವು. ನನ್ನ ಜೀವನದಲ್ಲಿ ಮೊಟ್ಟಮೊದಲ ಸಲ ಮಾಂಸವನ್ನು ಅಲ್ಲಿ ಕಂಡೆ. ಜೊತೆಗೆ ಅಂಗಡಿಯ ರೊಟ್ಟಿ ಇತ್ತು. ನನಗೆ ಎರಡೂ ಸವಿ ಎನಿಸಲಿಲ್ಲ. ಆಡಿನ ಮಾಂಸವಾದರೊ ಚಕ್ಕಳದಂತಿತ್ತು. ಅದನ್ನು ತಿನ್ನುವುದಾಗಲಿಲ್ಲ; ಓಕರಿಕೆ ಬಂದ ಹಾಗೆ ಆಗಿ ಬಿಟ್ಟುಬಿಟ್ಟೆ.

ಮನೆಗೆ ಬಂದ ಮೇಲೆ ನನ್ನಿಂದ ಆ ಇರುಳು ಕಳೆಯುವುದೆ ಸಾಧ್ಯ ವಾಗಲಿಲ್ಲ. ನಿದ್ದೆಯಲ್ಲಿ ಭಯಂಕರ ದುಃಸ್ವಪ್ನವೊಂದು ತಾಂಡವವಾಡುತಿತ್ತು. ಕಣ್ಣು ಮುಚ್ಚುವುದೊಂದೇ ತಡ, ಹೊಟ್ಟೆಯಲ್ಲಿ ಒಂದು ಆಡು ಕಿರಿಚಿದಂತೆ ತೋರುತಿತ್ತು. ನಾನು ಗೈದ ಈ ಹೇಯಕೃತ್ಯಕ್ಕಾಗಿ ನನಗೇ ಪಶ್ಚಾ ತ್ತಾಪವಾಗುತಿತ್ತು. ಆದರೆ ಅಷ್ಟರಲ್ಲಿ ಮಾಂಸ ತಿನ್ನುವುದು ನನ್ನ ಕರ್ತವ್ಯ ವೆಂದು ತೋರುತಿತ್ತು. ಆದುದರಿಂದ ಧೈರ್ಯಗುಂದದಂತೆ ನನಗೆ ನಾನೇ ಹುರಿದುಂಬಿಸುತಿದ್ದೆ.

# ೪. ದುರ್ಮಾರ್ಗದ ಹಾದಿಯಲ್ಲಿ

ಈ ಗೆಳೆಯ ಅಷ್ಟಿಷ್ಟಕ್ಕೆ ಎದೆಗುಂದುವವನಲ್ಲ. ಮಾಂಸದಿಂದ ಬಗೆ-ಬಗೆಯ ಸವಿ ತಿನಸುಗಳನ್ನು ಮಾಡತೊಡಗಿದ. ಮುಂದೆ, ಹೊಳೆಯ ದಂಡೆಯ ಏಕಾಂತ ಸ್ಥಳಕ್ಕೆ ಹೋಗುವ ಅಗತ್ಯ ತಪ್ಪಿಹೋಯಿತು ಏಕೆಂದರೆ ಅಡಿಗೆಯವನನ್ನು ಪುಸಲಾಯಿಸಿ ಸರಕಾರದ ಅತಿಥಿಗೃಹವನ್ನೆ ದೊರಕಿಸಿ ಬಿಟ್ಟಿದ್ದ. ಅಲ್ಲಿ ಕುರ್ಚಿ, ಟೇಬಲ್ಲು, ಮೊದಲಾದ ಎಲ್ಲ ಆಧುನಿಕ ಸಾಧನ ಗಳೊಂದಿಗೆ ಊಟ ಏರ್ಪಟ್ಟಿತ್ತು.

ಈ ವಿಲೋಭನ ನನ್ನನ್ನು ಮರುಳುಗೊಳಿಸಿತು. ರೊಟ್ಟಿಯ ಮೇಲಿನ ಅರುಚಿ ಇಲ್ಲದಂತಾಯಿತು. ಆಡಿನ ವಿಷಯದ ಕನಿಕರವೂ ಹೋಯಿತು. ಅಂದಿನಿಂದ, ಮಾಂಸವನ್ನಲ್ಲದಿದ್ದರೂ ಮಾಂಸದ ತಿಂಡಿಗಳನ್ನು ತಿನ್ನತೊಡ ಗಿದೆ. ಹೀಗೆ ನಡೆದುದು ಸುಮಾರು ಒಂದು ವರುಷದ ವರೆಗೆ. ಅಷ್ಟರಲ್ಲಿ ಒಟ್ಟು ೫-೬ ಕ್ಕಿಂತ ಹೆಚ್ಚು ಸಲ ತಿಂದಿರಲಾರೆವು. ಏಕೆಂದರೆ ಅತಿಥಿಗೃಹ ಪ್ರತಿದಿನವೂ ಸಿಕ್ಕುತ್ತಿರಲಿಲ್ಲ ಮತ್ತು ರುಚಿಕಟ್ಟಾದ ಖಾದ್ಯಗಳನ್ನು ಆಗಿಂದಾಗ ಮಾಡುವುದು ಸಾಧ್ಯವಿರಲಿಲ್ಲ. ಅದಕ್ಕೆ ಬೇಕಾದ ಹಣ ಎಲ್ಲಿಂದ ತರುವುದು? ಈ 'ಸುಧಾರಣೆ'ಗಾಗಿ ಕೊಡಲು ನನ್ನಲ್ಲಿ ಹಣವಿರಲಿಲ್ಲ. ಆದುದರಿಂದ ಈ ಗೆಳೆಯನೆ ಎಲ್ಲ ವೆಚ್ಚ ನೋಡಿಕೊಳ್ಳುತಿದ್ದ. ಅವನ್ನು ಅವನು ಎಲ್ಲಿಂದ ಹೇಗೆ ದೊರಕಿಸುತಿದ್ದನೊ ನನಗೆ ತಿಳಿಯದು. ನನ್ನನ್ನು ಮಾಂಸಾಹಾರಿಯನ್ನಾಗಿ ಮಾಡುವ ಆಸೆ ಇಟ್ಟುಕೊಂಡಿರಲಿಲ್ಲವೆ ಅವನು? ಆದುದರಿಂದ ಹೇಗೊ ಹಣ ತರುತಿದ್ದ. ಹೆಚ್ಚು ಹಣ ಅವನಿಗೂ ದೊರೆ ಯುತ್ತಿರಲಿಲ್ಲ. ಆದುದರಿಂದ ನಮ್ಮ ಈ ಕೂಟಗಳು ಸೇರಿದುದು ಕೆಲವು ಮಾತ್ರ, ಅದೂ ಬಹಳ ದಿನಗಳಿಗೊಮ್ಮೆ.

ಕಳ್ಳತನದ ಈ ಹಬ್ಬ ನಡೆದ ದಿನ ಊಟದ ಅವಶ್ಯಕತೆ ಇರುತ್ತಿರ ಲಿಲ್ಲ. ನಮ್ಮ ತಾಯಿ ಎಂದಿನಂತೆ ಊಟಕ್ಕೆ ಕರೆಯುತಿದ್ದಳು. ಊಟ ಬೇಡವೆಂದರೆ ಅದರ ಕಾರಣವನ್ನು ಕೇಳುತಿದ್ದಳು. ಅದಕ್ಕೆ ನಾನು 'ಇಂದು ಏಕೊ ಹಸಿವೆಯಾಗಿಲ್ಲ; ಸ್ವಲ್ಪ ಅಜೀರ್ಣವಾಗಿರಬೇಕು' ಎನ್ನುತ್ತಿದ್ದೆ. ಈ ನೆವಗಳನ್ನು ಮುಂದೊಡ್ಡುತ್ತಿರುವಾಗ ನನಗೆ ಕಸಿವಿಸಿಯಾಗದಿರುತ್ತಿರಲಿಲ್ಲ. 'ನಾನು ಹೇಳುತ್ತಿರುವುದು ಶುದ್ಧ ಸುಳ್ಳು; ಅದೂ ತಾಯಿಗೆ! ತಮ್ಮ

ಮಗ ಮಾಂಸಾಹಾರಿಯಾದುದು ತಿಳಿದರೆ ಅವರಿಗೆ ಮರಣಸಂಕಟವಾಗುವುದು ಖಂಡಿತ.' ಈ ಎಲ್ಲ ತಿಳಿವು ನನ್ನ ಹೃದಯವನ್ನು ಕೊರೆಯುತಿತ್ತು.

ಆದುದರಿಂದ ನಾನು ಹೀಗೆ ನಿಶ್ಚಯಿಸಿಕೊಂಡೆ:—"ಮಾಂಸತಿನ್ನುವುದು ಅವಶ್ಯವೆನ್ನೋಣ. 'ಸುಧಾರಿಸಿ'ದ ಆಹಾರವೂ ದೇಶಕ್ಕೆ ಬೇಕಾದು-ದೆನ್ನೋಣ. ಆದರೆ ಹಿರಿಯರನ್ನು ವಂಚಿಸುವುದು ಮಾಂಸತಿನ್ನದಿರುವುದಕ್ಕಿಂತ ಕೆಡುಕು. ಆದುದರಿಂದ ಅವರು ಬದುಕಿರುವ ವರೆಗೆ ಮಾಂಸವನ್ನು ಮುಟ್ಟಕೂಡದು. ತಿನ್ನುವುದಾದರೆ ಅವರ ನಂತರ, ನಾನು ಸ್ವತಂತ್ರನಾದಾಗ, ಬಹಿರಂಗವಾಗಿ ತಿನ್ನಬೇಕು. ಅಲ್ಲಿಯ ತನಕ ಅದನ್ನು ಬಿಟ್ಟುಕೊಡಲೇಬೇಕು.''

ನನ್ನ ಗೆಳೆಯನಿಗೆ ನನ್ನ ನಿರ್ಣಯ ತಿಳಿಸಿದೆ. ಅಂದಿನಿಂದ ಮಾಂಸವನ್ನು ಕಣ್ಣೆತ್ತಿ ಕೂಡ ನೋಡಲಿಲ್ಲ. ತಮ್ಮ ಇಬ್ಬರು ಮಕ್ಕಳು ಮಾಂಸ ತಿಂದಿರುವರೆಂದು ನಮ್ಮ ತಂದೆ ತಾಯಿಗಳಿಗೆ ಕೊನೆಗೂ ಗೊತ್ತಾಗಲಿಲ್ಲ.

ತಂದೆ ತಾಯಿಗಳನ್ನು ಮೋಸಗೊಳಿಸಬಾರದೆಂದು ಮಾಂಸವನ್ನೇನೊ ನಿರಾಕರಿಸಿದೆ. ಆದರೆ ಈ ಸ್ನೇಹ ಮಾತ್ರ ಬಿಡಲಿಲ್ಲ. ಅವನನ್ನು ಮಾರ್ಪಡಿಸಬೇಕೆನ್ನುವ ನನ್ನ ಹುಮ್ಮಸ್ಸು ಅನರ್ಥವನ್ನೆ ತರುತಿತ್ತು. ಇದು ನನಗೆ ಕೊನೆಯ ತನಕ ಗೊತ್ತಾಗಲಿಲ್ಲ.

ಈ ಗೆಳೆತನದಿಂದ ಹೆಂಡತಿಗೂ ದ್ರೋಹ ಬಗೆಯುವುದರಲ್ಲಿದ್ದೆ. ಆದರೆ ಸ್ವಲ್ಪದರಲ್ಲಿ ತಪ್ಪಿಹೋಯಿತು. ನಾನು ಸಿಕ್ಕಿಬಿದ್ದುದು ಪಾಪದ ದವಡೆಯಲ್ಲಿ. ಆದರೆ ದೇವರು ತನ್ನ ಅಪಾರ ಕರುಣೆಯಿಂದ ನನ್ನನ್ನು ಕಾಪಾಡಿದ. ಇಲ್ಲಿಗೂ ಈ ಸ್ನೇಹದಿಂದ ದೂರವಾಗಿರಬೇಕೆಂಬ ತಿಳಿವಳಿಕೆ ನನಗೆ ಬರಲಿಲ್ಲ. ಇದರಿಂದ ನಾನು ಇನ್ನೂ ಕೆಲವು ಕಹಿ ಅನುಭವಗಳನ್ನು ಪಡೆಯಬೇಕಾಯಿತು. ಅವನ ಕೆಲವು ಅಸಹ್ಯ ಕೆಲಸಗಳನ್ನು ನಾನು ಕಣ್ಣಾರೆ ಕಂಡೆ. ಈ ಹೇಯ ಕೃತ್ಯಗಳನ್ನು ನಾನು ಎಂದಿಗೂ ನಿರೀಕ್ಷಿಸಿರಲಿಲ್ಲ. ಆದುದರಿಂದ ಮುಂದೆ ಈ ಗೆಳೆತನಕ್ಕಾಗಿ ನನಗೆ ಪಶ್ಚಾತ್ತಾಪವಾಯಿತು.

ಇದೇ ಅವಧಿಗೆ ಸಂಬಂಧಿಸಿದ ಒಂದು ಸಂಗತಿ ನಾನು ಹೇಳಲೇಬೇಕು. ಹೆಂಡತಿಯ ವಿಷಯದಲ್ಲಿ ನನಗೆ ಅಸಮಾಧಾನವಿದ್ದಿತು ಅದಕ್ಕೆ ಈ ಸ್ನೇಹಿತನ ಸಹವಾಸವೂ ಒಂದು ಕಾರಣ. ಹೆಂಡತಿಯಲ್ಲಿ ನನಗೆ ಆಸಕ್ತಿ

ಅತಿಶಯವಾಗಿತ್ತು. ಆದರೆ ಸಂದೇಹವೂ ಇತ್ತು. ಒಳಗಿನ ಸಂಶಯಕ್ಕೆ ಈ ಸ್ನೇಹಿತನಿಂದ ಇನ್ನಷ್ಟು ಪುಟ ದೊರೆಯಿತು. ಸ್ನೇಹಿತನ ಮಾತು ನನಗೆ ವೇದವಾಕ್ಯ. ಅವನ ಮಾತನ್ನು ನಂಬಿ ಅವಳನ್ನು ಹಿಂಸೆ ಪಡಿಸಿದೆ. ಈ ತಪ್ಪಿಗಾಗಿ ನಾನು ಎಂದಿಗೂ ಕ್ಷಮಿಸಿಕೊಳ್ಳುವಂತಿಲ್ಲ. ಸಾಶಂಕ ಗಂಡನ ಹಿಂಸೆಯನ್ನು ಹಿಂದೂ ಸ್ತ್ರೀ ಮಾತ್ರ ನುಂಗಿಕೊಳ್ಳಬಲ್ಲಳು. ಹೆಂಗಸು ತಾಳ್ಮೆಯ ಪ್ರತ್ಯಕ್ಷ ಅವತಾರವೆಂದು ನಾನು ತಿಳಿದುದು ಅದಕ್ಕಾಗಿಯೆ. ಯಜಮಾನ ಅನವಶ್ಯಕವಾಗಿ ಸಂದೇಹಗೊಂಡರೆ ಆಳು, ತನ್ನ ಕೆಲಸ ಬಿಡಬಹುದು. ಮಗ ತಂದೆಯ ಆಶ್ರಯ ಬಿಡಬಹುದು. ಸ್ನೇಹಿತ ತನ್ನ ಗೆಳೆತನಕ್ಕೆ ಶರಣು ಹೊಡೆಯಬಹುದು. ಹೆಂಡತಿ ಗಂಡನಲ್ಲಿ ಸಂದೇಹಗೊಂಡರೆ ಮನದಲ್ಲಿಯೆ ಮರುಗುವಳು. ಆದರೆ ಹೆಂಡತಿಯ ವಿಷಯದಲ್ಲಿ ಗಂಡನಿಗೆ ಸಂದೇಹ ಬಂದರೆ ಅವಳ ಪಾಡು ನಾಯಿಪಾಡು. ಆಮೇಲೆ ಅವಳು ಎಲ್ಲಿಗೆ ಹೋಗುವುದು? ಹಿಂದೂ ಸ್ತ್ರೀಗೆ ಸಾಮಾನ್ಯವಾಗಿ ಬಿಡುಗಡೆಗೆ—ದಾಂಪತ್ಯ ವಿಚ್ಛೇದನೆಗೆ—ಇಂಬಿಲ್ಲ. ಕಟ್ಟಳೆ ಇವಳ ಬೆಂಬಲಕ್ಕೆ ಬರುವುದಿಲ್ಲ. ಅಂತೂ ನಾನು ಬುಡವಿಲ್ಲದ ಸಂದೇಹದಿಂದ ಹೆಂಡತಿಯನ್ನು ಬಹಳ ಕಾಡಿಸಿದೆ. ಇದನ್ನು ನಾನು ಎಂದಿಗೂ ಮರೆಯಲಾರೆ, ಕ್ಷಮಿಸಿಕೊಳ್ಳಲೂ ಆರೆ.

ಅಹಿಂಸಾ ತತ್ತ್ವವನ್ನು ನಾನು ಚೆನ್ನಾಗಿ ಅರಿತ ಮೇಲೆ, ಹೆಂಡತಿಯಲ್ಲಿ ಸಂದೇಹಗೊಳ್ಳುವ ಈ ರೋಗ ಬೇರಿನೊಂದಿಗೆ ಕಿತ್ತಿಹೋಯಿತು. ಬ್ರಹ್ಮಚರ್ಯೆಯ ಮಹತ್ವ ಆಗ ನನಗೆ ತಿಳಿಯಿತು. ಹೆಂಡತಿ ಗಂಡನ ತೊತ್ತಲ್ಲ. ಅವಳು ಅವನ ಒಡನಾಡಿ, ಸಹಚಾರಿಣಿ, ಸಹಧರ್ಮಿಣಿ. ಅವನ ಸುಖದುಃಖಗಳಲ್ಲಿ ಸಮಭಾಗಿನಿ. ತನ್ನ ಇಚ್ಛೆಯಂತೆ ನಡೆಯಲು ಗಂಡನು ಹೇಗೆ ಸ್ವತಂತ್ರನೊ ಹಾಗೆ ಅವಳೂ ಸ್ವತಂತ್ರಳು. ಈ ಮಾತು ನನಗೆ ಆಗ ತಿಳಿಯಿತು. ಸಂದೇಹ ಸಾಮ್ರಾಜ್ಯದ ಆ ದಿನಗಳ ನೆನಪಾದೊಡನೆ ನನ್ನ ಅವಿವೇಕ ಮತ್ತು ಕಾಮುಕತನದ ಕ್ರೌರ್ಯಕ್ಕಾಗಿ ಹೇಸಿಕೆಯಾಗುತ್ತದೆ; ಗೆಳೆಯನಲ್ಲಿಟ್ಟ ಕುರುಡು ನಂಬಿಗೆಗಾಗಿ ಬೇಸರವುಂಟಾಗುತ್ತದೆ.

## ೫. ಪಾಪ ನಿವೇದನೆಯ ಕತೆ

ನನ್ನ ಕೆಲವು ಕೆಟ್ಟ ನಡತೆಗಳನ್ನು ಹೇಳುವುದು ಇನ್ನೂ ಉಳಿದಿದೆ. ಈ ಮಾತು ನಾನು ಮಾಂಸಾಹಾರಿಯಾಗಿದ್ದ ಮತ್ತು ಅದಕ್ಕೂ ಸ್ವಲ್ಪ ಮೊದಲಿನ ಕಾಲಕ್ಕೆ ಸಂಬಂಧಿಸಿದ್ದು. ನನ್ನ ಮದುವೆಯಾದುದೂ ಸುಮಾರು ಅದೇ ದಿನಗಳಲ್ಲಿ.

ನನಗೂ ನನ್ನ ಒಬ್ಬ ನೆಂಟನಿಗೂ ಬೀಡಿ ಎಳೆಯುವ ಮನಸ್ಸಾಯಿತು. ಅದರಿಂದ ಏನಾದರೊಂದು ಲಾಭವಾಗುವುದೆಂದು ನಾವು ತಿಳಿದಿರಲಿಲ್ಲ. ಇಲ್ಲವೆ ಅದರ ವಾಸನೆಗೂ ಮರುಳಾಗಿರಲಿಲ್ಲ. ನಮಗೆ ತೋರಿದ್ದು ಬಾಯಿಯಿಂದ ಬರುವ ಹೊಗೆಯ ಸುರುಳಿಯಲ್ಲಿ ಏನೊ ಒಂದು ಚಮತ್ಕಾರ. ನಮ್ಮ ಚಿಕ್ಕಪ್ಪನಿಗೆ ಬೀಡಿಯ ಚಟವಿತ್ತು. ಅವನನ್ನು ನೋಡಿ ನಮಗೂ ಕುತೂಹಲ ಕೆರಳಿತು. ಆದರೆ ನಮ್ಮಲ್ಲಿ ಹಣವೆಲ್ಲಿಂದ ಬರಬೇಕು? ಆದುದರಿಂದ ಅವನು ಎಳೆದೊಗೆದ ತುಂಡುಗಳನ್ನು ಕಳ್ಳತನದಿಂದ ಸಂಗ್ರಹಿಸ ತೊಡಗಿದೆವು.

ಇವು ಯಾವಾಗಲೂ ಸಿಕ್ಕುತ್ತಿರಲಿಲ್ಲ. ಇದಲ್ಲದೆ ಇವನ್ನು ಹೆಚ್ಚು ಹೊತ್ತು ಎಳೆಯುವುದೂ ಸಾಧ್ಯವಿರಲಿಲ್ಲ. ಆದುದರಿಂದ ಹೊಸ ಬೀಡಿಗಳನ್ನು ಕೊಳ್ಳಲು ಮನೆಯ ಆಳುಮಗನ ಬೊಕ್ಕಣದಿಂದ ಹಣ ಕದಿಯ ತೊಡಗಿದೆವು. ಆದರೆ ಅವನ್ನು ಮುಚ್ಚಿಡುವುದೆಲ್ಲಿ? ದೊಡ್ಡವರೆದುರು ಸೇದುವಂತಿಲ್ಲ. ಅಂತೂ ಕದ್ದ ಚಿಲ್ಲರೆ ಹಣದಿಂದ ಕೆಲವು ವಾರ ತಳ್ಳಿದೆವು. ಅಷ್ಟರಲ್ಲಿ, ಯಾವುದೊ ಒಂದು ಗಿಡದ ದಂಟಿಗೆ ತೂತಿರುವುದಾಗಿಯೂ ಅದನ್ನು ಬೀಡಿಯಂತೆ ಸೇದಬಹುದೆಂದೂ ನಮಗೆ ತಿಳಿಯಿತು. ಅದನ್ನು ದೊರಕಿಸಿ ಸೇದುವುದು ಮೊದಲಾಯಿತು.

ಆದರೆ ಇದರಿಂದ ನಮಗೆ ಸಮಾಧಾನವಾಗಲಿಲ್ಲ. ಪರಾಧೀನತೆ ನಮ್ಮನ್ನು ವೇದನೆಗೀಡುಮಾಡಿತು. ಹಿರಿಯರ ಅಪ್ಪಣೆ ಇಲ್ಲದೆ ಯಾವ ಕೆಲಸ ಮಾಡಲೂ ನಾವು ಅಸಮರ್ಥರು. ಇದನ್ನು ತಾಳಿಕೊಳ್ಳುವುದೆಂತು? ಕಟ್ಟಕಡೆಗೆ ಅತಿಬೇಸರದಿಂದ ಆತ್ಮಹತ್ಯ ಮಾಡಿಕೊಳ್ಳುವುದೆಂದು ನಿಶ್ಚಯಿಸಿದೆವು.

ಇದನ್ನು ಮಾಡಿಕೊಳ್ಳುವ ರೀತಿಯಾವುದು? ಅದಕ್ಕೆ ಬೇಕಾಗುವ ವಿಷವನ್ನು ಎಲ್ಲಿಂದ ತರಬೇಕು? ಧತ್ತೂರಿ ಬೀಜ ಬಹಳ ವಿಷಕಾರಿಯೆಂದು ನಮಗೆ ಗೊತ್ತಾಗಿತ್ತು. ಅದಕ್ಕಾಗಿ ಕಾಡಿನಲ್ಲಿ ಎಲ್ಲೆಲ್ಲಿಯೊ ಅಲೆದು ಕೊನೆಗೆ ಸಂಪಾದಿಸಿದ್ದಾಯಿತು. ಈ ಬೀಜಭಕ್ಷಣಕ್ಕೆ ಸಂಜೆಯ ಸಮಯವೆ ತಕ್ಕ ಕಾಲವೆಂದು ನಿಶ್ಚಯವಾಯಿತು. ಸಾಯಂಕಾಲ ಕೇದಾರೇಶ್ವರ ಮಂದಿರದ ನಂದಾದೀಪಕ್ಕೆ ತುಪ್ಪಹಾಕಿದೆವು. ಆಮೇಲೆ ದೇವದರ್ಶನ ಪಡೆದು ಯಾರ ಕಣ್ಣಿಗೂ ಕಾಣದ ಶಾಂತವಾದ ಒಂದು ಸ್ಥಳಕ್ಕೆ ಹೋದೆವು. ಎಲ್ಲವೂ ಆಯಿತು; ಧೈರ್ಯವೊಂದು ಮಾತ್ರ ಬರಲಿಲ್ಲ. ಕೂಡಲೇ ಸಾಯದಿದ್ದರೆ ಹೇಗೆ? ಇದಲ್ಲದೆ ಆತ್ಮಹತ್ಯೆಯಾದರೂ ಏತಕ್ಕೆ? ಪರಾಧೀನತೆಯನ್ನು ಸಹಿಸಿಕೊಳ್ಳಬಾರದೇಕೆ? ಈ ಎಲ್ಲ ವಿಚಾರಗಳ ನಡುವೆ ಎರಡು ಮೂರು ಬೀಜ ನುಂಗಿದ್ದೆವು. ಹೆಚ್ಚು ತಿನ್ನಲು ಧೈರ್ಯವಾಗಲಿಲ್ಲ. ಸಾಯಲು ಇಬ್ಬರೂ ಹಿಂದೆಗೆದೆವು. ಆಮೇಲೆ, ರಾಮದರ್ಶನ ಪಡೆದು ಆತ್ಮಹತ್ಯೆಯ ನಿಶ್ಚಯ ಬಿಟ್ಟುಕೊಟ್ಟೆವು.

ಆತ್ಮಹತ್ಯೆಯ ನಿರ್ಧಾರ ಸುಲಭ, ಆತ್ಮಹತ್ಯೆ ಸುಲಭವಲ್ಲ ಎಂದು ಆಗ ತಿಳಿದುಕೊಂಡೆ. ಅಂದಿನಿಂದ, ಆತ್ಮಹತ್ಯೆ ಮಾಡಿಕೊಳ್ಳುವೆನೆನ್ನುವವರ ಮಾತಿಗೆ ನಾನು ಹೆದರುವುದಿಲ್ಲ.

ಅಂತೂ ಈ ಕತೆ ನಡೆದ ಮೇಲೆ ನಮ್ಮಿಬ್ಬರಿಗೂ ಕೊರೆಬೀಡಿಯ ಆಸಕ್ತಿ ಇಂಗಿಹೋಯಿತು. ಅದರಿಂದ ನಮಗೆ ಏನೂ ತೊಂದರೆ ಆಗಲಿಲ್ಲ. ಅಂದಿನಿಂದ ಮನೆಯ ಆಳುಮಗನ ಬೊಕ್ಕಣದಿಂದ ದುಡ್ಡು ಕದಿಯುವುದನ್ನೂ ನಿಲ್ಲಿಸಿದೆವು.

ಬೀಡಿ ಎಳೆಯುವ ಬಯಕೆ ಆಮೇಲೆ ನನಗೆ ಎಂದಿಗೂ ಆಗಲಿಲ್ಲ. ಈ ಚಟ ಅನಾಗರಿಕ, ಹೊಲಸು, ಮತ್ತು ಬಹಳ ಹಾನಿಕರವೆಂದು ಈಗ ತಿಳಿದಿದ್ದೇನೆ. ಬತ್ತಿ ಸೇದುವ ಈ ಹುಚ್ಚು, ಪ್ರಪಂಚದಲ್ಲೆಲ್ಲ ಹೇಗೆ ಹಬ್ಬಿತೊ ನಾನು ಬೇರೆ ಕಾಣೆ. ಈ ಚಟದ ಜನರಿದ್ದ ಹೊಗೆಬಂಡಿಯಲ್ಲಿ ಪ್ರಯಾಣ ಮಾಡಿದರೆ ಉಸಿರು ಕಟ್ಟಿದಂತಾಗುತ್ತದೆ.

ಆಮೇಲೆ ಇದೇ ಮಾದರಿಯ ಅಯೋಗ್ಯ ಕೆಲಸದಲ್ಲಿ ಇನ್ನೂ ಸ್ವಲ್ಪ ಮುಂದುವರಿದೆ. ಅದರೆದುರು ಈ ಬೀಡಿಸೇದುವ ಮತ್ತು ಪುಡಿಕಾಸು ಎಬ್ಬಿ

ಸುವ ಈ ಕೆಲಸ ಅತ್ಯಲ್ಪ, ಕ್ಷಮ್ಯ. ಬೊಕ್ಕಣ ಕತ್ತರಿಸುವ ಕೆಲಸವಮಾಡಿದ್ದು ನನ್ನ ಹನ್ನೆರಡು ಹದಿಮೂರನೆ ವಯಸ್ಸಿನಲ್ಲಿ, ಅಥವಾ ಅದಕ್ಕೂ ಸ್ವಲ್ಪ ಮೊದಲು. ನಾನು ಮಾಡಿದ ಇನ್ನೊಂದು ಕಳವು ಹದಿನೈದನೆ ವಯಸ್ಸಿನಲ್ಲಿ. ಈಸಲ, ನನ್ನ ಮಾಂಸಾಹಾರಿ ಅಣ್ಣನಿರಲಿಲ್ಲವೆ? ಅವನ ಚಿನ್ನದ ಕೈಕಡಗದ ಒಂದು ತುಂಡು ಕತ್ತರಿಸಿಬಿಟ್ಟೆ. ಈ ಅಣ್ಣ ಸುಮಾರು ಇಪ್ಪತ್ತೈದು ರೂಪಾಯಿಗಳ ಸಾಲಗುಳಿಯಾಗಿದ್ದ. ಅವನ ಕೈಗೆ ಒಂದು ಚಿನ್ನದ ಬಳೆ ಇತ್ತು. ಆದರಿಂದ ತುಂಡು ಕತ್ತರಿಸುವುದು ಆಯಾಸದ ಕೆಲಸವಲ್ಲ.

ಅಂತೂ ಈ ಕೆಲಸ ಮಾಡಿ ಅಣ್ಣನ ಸಾಲ ಮುಟ್ಟಿಸಿದ್ದಾಯಿತು. ಆದರೆ ಆಮೇಲೆ ಅದೇಕೊ ನನ್ನಲ್ಲಿ ತಾಳ್ಮೆ ಉಳಿಯಲಿಲ್ಲ. ಇನ್ನೆಂದಿಗೂ ಕದಿಯಬಾರದೆಂದು ಅಂದೇ ನಿಶ್ಚಯಿಸಿದೆ. ಈ ಎಲ್ಲ ತಪ್ಪುಗಳನ್ನು ನಮ್ಮ ತಂದೆಗೆ ಹೇಳಬೇಕೆಂದೂ ಗೊತ್ತುಮಾಡಿಕೊಂಡೆ. ಆದರೆ ಅವರಲ್ಲಿ ಹೇಳುವ ಧೈರ್ಯ ನನಗಿರಲಿಲ್ಲ. ಇದಕ್ಕೆ ಕಾರಣ ನಮ್ಮ ತಂದೆ ಹೊಡೆಯುವರೇನೊ ಎಂಬುದಲ್ಲ. ಅವರು ನಮ್ಮನ್ನು ಯಾರನ್ನೂ ಹೊಡೆದ ನೆನಪು ನನಗಿಲ್ಲ. ನನ್ನ ಈ ಕೆಟ್ಟ ನಡತೆ ಅವರ ಕೊರಗಿಗೆ ಕಾರಣವಾಗಬಹುದೆಂಬ ಹೆದರಿಕೆ ಈ ಅಧೈರ್ಯಕ್ಕೆ ಕಾರಣ. ಆದರೆ ಈ ಅಪಾಯಕ್ಕೆ ತಲೆಗೊಡಲೇಬೇಕೆಂದು ಗೊತ್ತುಮಾಡಿಕೊಂಡಿದ್ದೆ. ತಪ್ಪು ಒಪ್ಪಿಕೊಳ್ಳದಿದ್ದರೆ ಹೃದಯಶುದ್ಧಿ ಆಗುವುದೆಂತು?

ಕಟ್ಟಕಡೆಗೆ, ಎಲ್ಲ ಸಂಗತಿಯನ್ನು ಬರೆದು ಅವರ ಕೈಯಲ್ಲಿ ಕೊಟ್ಟು ಕ್ಷಮೆ ಕೇಳಿಕೊಳ್ಳಬೇಕೆಂದು ಗೊತ್ತುಮಾಡಿಕೊಂಡೆ. ಕಾಗದದಲ್ಲಿ ಎಲ್ಲ ತಪ್ಪನ್ನೂ ಒಪ್ಪಿಕೊಂಡು ತಕ್ಕ ಶಿಕ್ಷೆಯನ್ನೂ ಕೇಳಿಕೊಂಡೆ. ನನ್ನ ತಪ್ಪಿತಕ್ಕಾಗಿ ತಾವೇ ದಂಡನೆಗೆ ಗುರಿಯಾಗಬಾರದೆಂದೂ ಅವರಿಗೆ ಬೇಡಿಕೊಂಡಿದ್ದೆ. ಮುಂದೆ ಎಂದೂ ಇಂತಹ ತಪ್ಪು ಮಾಡುವುದಿಲ್ಲವೆಂದು ಆಶ್ವಾಸನವನ್ನೂ ಕೊಟ್ಟಿದ್ದೆ.

ತಂದೆಗೆ ಈ ಕಾಗದ ಒಪ್ಪಿಸುವಾಗ ನಾನು ನಡುಗುತ್ತಲಿದ್ದೆ. ಅವರು ಬೇನೆಯಿಂದ ಹಾಸಿಗೆ ಹಿಡಿದಿದ್ದರು. ನುಣುಪಾದ ಹಲಿಗೆಯ ಮಂಚದ ಮೇಲೆ ಅವರು ಮಲಗಿದ್ದರು. ಈ ಚೀಟಿ ಅವರ ಕೈಯಲ್ಲಿಟ್ಟು ನನಗಾಗಬಹುದಾದ ಶಿಕ್ಷೆಯನ್ನು ಎದುರುನೋಡುತ್ತಲಿದ್ದೆ.

ನಮ್ಮ ತಂದೆ ಅದನ್ನು ಮೊದಲಿನಿಂದ ಕೊನೆಯವರೆಗೆ ಓದಿದರು. ಅವರ ಗಲ್ಲಗಳ ಮೇಲೆ ಕಣ್ಣೀರು ಮುತ್ತಿನಂತೆ ಉದುರಿ ಕಾಗದವನ್ನು ತೋಯಿಸ ತೊಡಗಿತು. ಆಗ ಅವರು ಯೋಚನಾಪರರಾಗಿ ಒಂದು ನಿಮಿಷ ಕಣ್ಣು ಮುಚ್ಚಿದರು. ಆಮೇಲೆ ಆ ಕಾಗದವನ್ನು ಹರಿದೊಗೆದರು. ಅದನ್ನು ಓದುವುದಕ್ಕಾಗಿ ಅವರು ಎದ್ದು ಕುಳಿತಿದ್ದರು. ಆದರೆ ಈಗ ಮಲಗಿಬಿಟ್ಟರು. ನನಗೂ ಅಳುವು ಬಂದಿತು. ನಮ್ಮ ತಂದೆಗಾದ ನೋವಿನ ಆಳ ಎದ್ದು ಕಾಣುತ್ತಲಿತ್ತು. ಅಂದಿನ ಆ ಚಿತ್ರ ಇಂದಿಗೂ ನನ್ನ ಮನಸ್ಸಿನಲ್ಲಿ ರೂಪುಗೊಂಡಿದೆ. ಒಳ್ಳೇ ಚಿತ್ರಗಾರನಾಗಿದ್ದರೆ ನಾನು ಆ ನೋಟವನ್ನು ಒಳ್ಳೇ ಹೃದಯಂಗಮವಾಗಿ ಚಿತ್ರಿಸುತಿದ್ದೆ.

ಪ್ರೇಮದ ಕುರುಹಾದ ಆ ಮುತ್ತಿನ ಹನಿ ನನ್ನ ಮನದ ಕಿಲ್ಮಿಷವನ್ನು ಕೊಚ್ಚಿಬಿಟ್ಟುವು. ಅಂದಿಗೆ ನನ್ನ ಪಾಪ ತೊಳೆದುಹೋಯಿತು. ಇಂತಹ ಪ್ರೀತಿಯ ಅನುಭವ ಬಲ್ಲವನೇ ಬಲ್ಲ. ಒಂದು ಗೀತೆ ಹೀಗಿದೆ:— 'ಪ್ರೇಮ ಬಾಣದಿಂದ ತಾಡಿತನಾದವನೇ ಅದರ ತೀಕ್ಷ್ಣತೆಯನ್ನು ಬಲ್ಲ.'

ಆಗ ನಾನು ಅದರಲ್ಲಿ ಕಂಡದ್ದು ತಂದೆಯ ಪ್ರೇಮವನ್ನು ಮಾತ್ರ. ಆದರೆ ನಿಜವಾಗಿ ಅದು ಅಹಿಂಸೆಯ ಪಾಠವಾಗಿತ್ತು. ಇಂತಹ ಅಹಿಂಸೆ ಪ್ರಪಂಚವನ್ನೆ ವ್ಯಾಪಿಸಿದಾಗ ಬದಲಾಗದ ವಸ್ತು ಯಾವುದು? ಅದರ ಪ್ರಭಾವಕ್ಕೆ ಮೇರೆಯೆ ಇಲ್ಲ.

ಇಂತಹ ಕ್ಷಮಾಗುಣ ನನ್ನ ತಂದೆಯ ಸ್ವಭಾವವಲ್ಲ. ನಾನು ತಿಳಿದುದು ಅವರು ಬಹಳ ರೇಗುವರು, ಬಿರುನುಡಿಗಳನ್ನಾಡಿ ಹಣೆ ಗಟ್ಟಿಸಿಕೊಳ್ಳುವರು ಎಂದು. ಆದರೆ ಅವರು ಅತಿ ಶಾಂತರಾಗಿದ್ದರು. ಇದು ಪಾಪ ನಿವೇದನೆಯ ಫಲವೆಂದು ನನ್ನ ನಂಬುಗೆ. ಇನ್ನೊಮ್ಮೆ ತಪ್ಪು ಮಾಡುವುದಿಲ್ಲವೆಂದು ಭರವಸೆ ಇತ್ತು, ನಮ್ಮನ್ನು ಕ್ಷಮಿಸುವ ಅಧಿಕಾರವಿರುವಾತನಲ್ಲಿ ಶುದ್ಧ ಮನಸ್ಸಿನಿಂದ ಪಾಪನಿವೇದನೆ ಮಾಡುವುದು ನಿಜವಾದ ಪಶ್ಚಾತ್ತಾಪ. ಹೀಗೆ ಹೃದಯವನ್ನೆ ಬಿಚ್ಚಿದ್ದರಿಂದ ಅವರಿಗೆ ನನ್ನ ವಿಷಯದಲ್ಲಿ ನಿಶ್ಚಿಂತೆಯಾಯಿತು; ಅಪಾರವಾದ ಮಮತೆ ಉಂಟಾಯಿತು.

ನನ್ನ ಹದಿನಾರನೆ ವಯಸ್ಸಿನಲ್ಲಿ ನಮ್ಮ ತಂದೆ ತೀರಿಕೊಂಡರು.

# ೬. ಮಾರ್ಗದರ್ಶಿಯಾದ ತತ್ತ್ವ

ನನಗೆ ಪರಧರ್ಮಗಳಲ್ಲಿ ಇಲ್ಲವೆ ಹಿಂದೂ ಧರ್ಮದ ಇತರ ಮತಗಳಲ್ಲಿ ಸಮಭಾವನೆ ಇತ್ತು. ಇದನ್ನು ರಾಜಕೋಟೆಯಲ್ಲೇ ಕಲಿತಿದ್ದೆ. ನಮ್ಮ ತಂದೆತಾಯಿಗಳು ಹವೇಲಿಗೆ ಹೋಗುತ್ತಿದ್ದರು. ಅದರಂತೆ ಶಿವಾಲಯಕ್ಕೂ ರಾಮಮಂದಿರಕ್ಕೂ ಹೋಗುತ್ತಿದ್ದರು. ಚಿಕ್ಕವರಾದ ನಮ್ಮನ್ನು ತಮ್ಮೊಂದಿಗ ಕರೆದೊಯ್ಯುತ್ತಿದ್ದರು. ಇಲ್ಲವೆ ಬೇರೆಯವರ ಜೊತೆಗೆ ಕಳಿಸುತ್ತಿದ್ದರು. ನಮ್ಮ ತಂದೆಯವರನ್ನು ಜೈನ ಸನ್ಯಾಸಿಗಳು ಆಗಿಂದಾಗ ಕಾಣುತ್ತಿದ್ದರು. ಇತರ ಧರ್ಮದವರ ಆಹಾರ ಸ್ವೀಕರಿಸದಿರುವುದು ಜೈನರ ಆಚಾರ. ಹೀಗಿದ್ದರೂ ಈ ಸನ್ಯಾಸಿಗಳು ಜೈನರಲ್ಲದ ನಾವು ಕೊಟ್ಟ ಆಹಾರ ತಿನ್ನುತ್ತಿದ್ದರು. ಧಾರ್ಮಿಕ, ಐಹಿಕ ವಿಷಯಗಳನ್ನು ನಮ್ಮ ತಂದೆಯವರೊಡನೆ ಚರ್ಚಿಸುತ್ತಿದ್ದರು.

ನಮ್ಮ ತಂದೆಗೆ ಮುಸಲ್ಮಾನರೂ ಪಾರಸಿಗಳೂ ಗೆಳೆಯರಿದ್ದರು. ತಂದೆಯವರೊಡನೆ ತಮ್ಮ ತಮ್ಮ ಧರ್ಮವನ್ನು ಕುರಿತು ಮಾತನಾಡುತ್ತಿದ್ದರು. ನಮ್ಮ ತಂದೆ ಅದನ್ನು ಆದರದಿಂದ ಕೇಳುತ್ತಿದ್ದರು; ಕುತೂಹಲದಿಂದ ಕೇಳುತ್ತಿದ್ದುದೂ ಉಂಟು. ತಂದೆಯ ಆರೈಕೆ ನಾನೇ ಮಾಡುತ್ತಲಿದ್ದೆ. ಆದುದರಿಂದ ಈ ಚರ್ಚೆ ಕೇಳುವ ಎಷ್ಟೋ ಸಂದರ್ಭ ನನಗೆ ಒದಗಿವೆ. ಎಲ್ಲ ಧರ್ಮಗಳನ್ನು ಸಮಭಾವನೆಯಿಂದ ನೋಡಬೇಕೆಂದು ಈ ಹಲವು ಸಂಗತಿಗಳ ಜೋಡಣೆಯಿಂದ ನನಗೆ ತಿಳಿಯಿತು.

ಇತರ ಧರ್ಮಗಳನ್ನು ಸಮಭಾವದಿಂದ ನೋಡುವುದನ್ನು ಕಲಿತೆನೆಂದೆನಷ್ಟೆ? ನನಗೆ ದೇವರಲ್ಲಿ ನಿಚ್ಚಳವಾದ ನಂಬುಗೆ ಇತ್ತೆಂದು ಇದರಿಂದ ತಿಳಿಯಕೂಡದು. ಹೃದಯದಲ್ಲಿ ಒಂದು ಮಾತು ಮಾತ್ರ ಚೆನ್ನಾಗಿ ನಾಟಿತು—ಜಗತ್ತಿನ ಆಧಾರ ನೀತಿ, ನೀತಿಯ ಜೀವಾಳ ಸತ್ಯ, ಎಂದು. ಸತ್ಯೋಪಾಸನೆ ಅಂದಿನಿಂದ ನನ್ನ ಗುರಿಯಾಯಿತು. ಈ ಧ್ಯೇಯದ ಮಹತ್ವ ದಿನದಿನವೂ ಸ್ಪಷ್ಟವಾಗಿ ಕಾಣತೊಡಗಿತು. ಆಗಿನಿಂದ ಈ ಧ್ಯೇಯ-ಭಾವನೆ ನನ್ನಲ್ಲಿ ವಿಶಾಲವಾಗುತ್ತಿದೆ.

ಗುಜರಾತಿಯೊಳಗಿನ ನೀತಿಪರ ಪದ್ಯವೊಂದು ನನ್ನ ಮನಸ್ಸು ಹೃದಯ ಎರಡನ್ನೂ ತಟ್ಟಿತು. ‘ಕೆಡುಕು ಮಾಡಿದವನಿಗೆ ಒಳಿತನ್ನು

ಕೋರು' ಎಂಬುದು ಆ ಗೀತೆಯ ನಿರೂಪ. ನನ್ನ ಮಟ್ಟಿಗೆ ಅದು ಮಾರ್ಗ ದರ್ಶಿಯಾದ ತತ್ತ್ವ. ಇದರಲ್ಲಿ ನನಗೆ ಬಹಳ ಆಸಕ್ತಿಯುಂಟಾಗಿದೆ. ನನ್ನ ಕಾರ್ಯಕ್ಷೇತ್ರದಲ್ಲಿ ಅದರ ಹಲವು ಪ್ರಯೋಗಗಳನ್ನು ಮಾಡಿದ್ದೇನೆ. ನನಗೆ ಅದ್ಭುತವಾಗಿ ಕಂಡ ಪದ್ಯ ಇಲ್ಲಿದೆ:—

ಹರಸಿದಗೆ ಒಳಿತೆಳಸಿ ಭಕುತಿಯಿಂದಲಿ ಬಾಗಿ
ಹರಸಿದಗೆ ದಾಹವನು ಅಮೃತಾನ್ನ ವುಣಿಸಿ ।
ಅರೆಕಾಸನಿತ್ತವಗೆ ವರಹಂಗಳನೆ ನೀಡಿ
ಹರಣವಂ ಕಾಯ್ದವಗೆ ಹರಣವನೆ ನೀಗಿ ॥
ಕಿರಿ ನೆರವನಿತ್ತವಗೆ ಪಿರಿದಾಗಿ ಮಾರ್ಗುಡುವ
ಪರಿಯೆ ಅರಿದರ ತೆರನದೆಂದು ಅರಿಯೈ ॥
ಪಿರಿ ಬಗೆಯ ಸಂತರೋ ನರರೊಳಂತರವಿಡದೆ
ಹರುಷದಿಂ ಕೇಡಿಗಳಿಗೊಳಿತನೆಸಗುವರು ॥

## ೭. ಮುಪ್ಪುರಿಯ ಪ್ರತಿಜ್ಞೆ

೧೮೮೭ರಲ್ಲಿ ನಾನು ಮ್ಯಾಟ್ರಿಕ್ಯುಲೇಶನ್ ತೇರ್ಗಡೆಯಾದೆ. ಆಗ ಈ ಪರೀಕ್ಷೆ ನಡೆಯುತಿದ್ದುದು ಎರಡು ಕಡೆ—ಅಹಮ್ಮದಾಬಾದು ಮತ್ತು ಮುಂಬಯಿ. ದೇಶಕ್ಕೇ ಅಂಟಿದ ಬಡತನದಿಂದ, ಕಾಠೇವಾಡಿನ ವಿದ್ಯಾರ್ಥಿಗಳು ಹತ್ತಿರವಿದ್ದು ಕಡಿಮೆ ವೆಚ್ಚಬರುವ ಕೇಂದ್ರಕ್ಕೇ ಹೋಗುತ್ತಿದ್ದರು. ನಮ್ಮದೂ ಬಡ ಕುಟುಂಬ. ಆದುದರಿಂದ ನಾನೂ ಹಾಗೆಯೆ ಮಾಡಬೇಕಾಯಿತು. ಸಂಗಡಿಗರಿಲ್ಲದೆ ನಾನು ಪ್ರವಾಸ ಮಾಡಿದ್ದು ಇದೇ ಮೊದಲು.

ನಾನು ಕಾಲೇಜು ಸೇರಬೇಕೆಂದು ಹಿರಿಯರ ಇಚ್ಛೆ. ಕಾಲೇಜು ಮುಂಬಯಿಯಲ್ಲಿಯೂ ಇತ್ತು; ಭಾವನಗರದಲ್ಲಿಯೂ ಇತ್ತು. ಭಾವನಗರ ಕಡಿಮೆ ವೆಚ್ಚಬರುವ ಸ್ಥಳ. ಆದುದರಿಂದ ಅಲ್ಲಿಗೆ ಹೋಗಿ ಶಾಮುಲದಾಸ ಕಾಲೇಜು ಸೇರುವುದೆಂದು ನಾನು ಗೊತ್ತುಮಾಡಿಕೊಂಡೆ. ಅಲ್ಲಿಗೆ ಸೇರಿದ ಮೇಲೆ ನನಗೆ ಕಣ್ಣುಕಟ್ಟಿ ಬಿಟ್ಟಂತಾಯಿತು. ಕಾಲೇಜಿನಲ್ಲಿ ಅಧ್ಯಾಪಕರು

* 'ಸತ್ಯಶೋಧನೆ'ಯ ೧ನೆಯ ಸಂಪುಟದಿಂದ ಆದರಪೂರ್ವಕ ಎತ್ತಿದ್ದು.

ಹೇಳುವ ಯಾವ ವಿಷಯವೂ ತಿಳಿಯುತ್ತಿರಲಿಲ್ಲ. ಅಧ್ಯಾಪಕರ ಉಪನ್ಯಾಸ (Lectures)ಗಳಲ್ಲಿ ನನಗೆ ಆಸಕ್ತಿಯಾಗುವುದಿರಲಿ, ತಿಳಿದುಕೊಳ್ಳಲೂ ಸಾಧ್ಯವಾಗಲಿಲ್ಲ. ಇದು ಅವರ ತಪ್ಪಲ್ಲ. ಅಲ್ಲಿಯ ಅಧ್ಯಾಪಕರು ಶ್ರೇಷ್ಠರೆಂದು ಹೆಸರಾದವರು. ಆದರೆ ನನ್ನಲ್ಲೇ ಹುರುಳಿರಲಿಲ್ಲ. ಅಂತೂ ಮೊದಲ ಆರು ತಿಂಗಳಿಗೇ ಮನೆಗೆ ಹಿಂದಿರುಗಿದೆ.

ಮಾವಜಿ ದವೆ ಎಂಬ ಬ್ರಾಹ್ಮಣರಿಗೂ ನಮ್ಮ ಮನೆತನಕ್ಕೂ ಬಹಳ ದಿನದ ಋಣಾನುಬಂಧ. ಇವರು ವಿದ್ವಾಂಸರು, ವಿವೇಕಿಗಳು; ನಮ್ಮ ಕುಟುಂಬದ ಸಲಹೆಗಾರರೂ ಅಹುದು. ನಾನು ಬಾರಿಸ್ಟರ್–ವಕೀಲತನ–ಪರೀಕ್ಷೆಗಾಗಿ ಮೂರು ವರುಷ ಇಂಗ್ಲಂಡಿಗೆ ಹೋಗಬೇಕೆಂದು ಇವರು ವಿಧವೆಯಾದ ನನ್ನ ತಾಯಿಗೆ ಸಲಹೆ ಕೊಟ್ಟರು. ಆಮೇಲೆ ನನಗೆ 'ನೀನು ಇಲ್ಲಿ ಓದುವುದಕ್ಕಿಂತ ಇಂಗ್ಲಂಡಿಗೆ ಹೋಗುವುದು ಮೇಲಲ್ಲವೆ?' ಎಂದು ಕೇಳಿದರು. ನನಗೆ ಬೇಕಾದ ಇದಕ್ಕೂ ಒಳ್ಳೆಯ ಸಂಗತಿ ಯಾವುದು? ಕಾಲೇಜಿನ ಕಠಿಣವಾದ ಅಭ್ಯಾಸ ನನಗೆ ಸಾಕಾಗಿತ್ತು. 'ಅಲ್ಲಿಗೆ ಎಷ್ಟು ಬೇಗ ಕಳಿಸುವಿರೊ ಅಷ್ಟು ಒಳ್ಳೇದು' ಎಂದು ಹಿಗ್ಗಿನಿಂದ ಹೇಳಿದೆ.

ನಮ್ಮ ಅಣ್ಣನಿಗೆ ತುಂಬಾ ಯೋಚನೆಗಿಟ್ಟಿತು. ವೆಚ್ಚಕ್ಕೆ ಹಣ ಎಲ್ಲಿಂದ ತರುವುದು? ಇದಲ್ಲದೆ ನಾನು ಪ್ರಾಯದ ಹುಡುಗ. ಅತಿ ದೂರದ ವಿದೇಶಕ್ಕೆ ನನ್ನೊಬ್ಬನನ್ನೆ ಕಳಿಸುವುದು ಯೋಗ್ಯವೆ?

ನಮ್ಮ ತಾಯಿಯ ತಲ್ಲಣ ಇದಕ್ಕೂ ಹೆಚ್ಚು. ನನ್ನನ್ನು ಅಗಲುವ ವಿಚಾರವೇ ಅವಳಿಗೆ ಸರಿಬರಲಿಲ್ಲ. ಸೂಕ್ಷ್ಮವಾದ ವಿಚಾರಣೆಗೆ ಆಕೆ ಮೊದಲುಮಾಡಿದಳು. ಆಕೆಗೆ ಒಬ್ಬರು 'ಇಂಗ್ಲಂಡಿನಲ್ಲಿ ತರುಣರು ಬಹು ಬೇಗ ಸ್ವೈರ ವೃತ್ತಿಗೆ ಇಳಿಯುವರೆಂ'ದು ಹೇಳಿದ್ದರು. ಮಾಂಸಾಹಾರಿಗಳಾಗುವರೆಂದು ಇನ್ನೊಬ್ಬರು ಹೇಳಿದ್ದರು. ಅಲ್ಲಿ ಹೆಂಡವಿಲ್ಲದೆ ಇರುವುದೇ ಅಸಾಧ್ಯವೆಂದು ಮತ್ತೊಬ್ಬರ ಅಭಿಪ್ರಾಯ. 'ಇದಕ್ಕೇನು ಹೇಳುವೆ?' ಎಂದು ಆಕೆ ನನ್ನನ್ನು ಕೇಳಿದಳು. 'ನನ್ನಲ್ಲಿ ನಂಬಿಗೆ ಇಲ್ಲವೆ? ನಿನ್ನಲ್ಲಿ ಎಳ್ಳಷ್ಟೂ ಸುಳ್ಳು ಹೇಳುವುದಿಲ್ಲ. ಇದರಲ್ಲಿ ಯಾವುದನ್ನೂ ಮುಟ್ಟುವುದಿಲ್ಲವೆಂದು ಆಣೆ ಮಾಡುತ್ತೇನೆ. ಹಾಗೆ ಹೆದರಿಕೆ ಏನಾದರೂ ಇದ್ದರೆ ಜೋಶಿಜಿ (ದವೆ) ಯವರು ಹೇಳುತಿದ್ದರೆ?' ಎಂದು ನಾನು ಕೇಳಿದೆ.

‘ ಇಲ್ಲಿ ನಿನಗೆ ತಕ್ಕ ಅನುಕೂಲತೆ ಇದೆ. ಆದುದರಿಂದ ನನಗೆ ಯೋಚನೆ ಇಲ್ಲ. ಆದರೆ ದೂರದೇಶದಲ್ಲಿರುವ ನಿನ್ನನ್ನು ಹೇಗೆ ನಂಬಲಿ? ನನಗೆ ಮುಂದಿನ ಹಾದಿಯೆ ತಿಳಿಯದಂತಾಗಿದೆ. ಈ ವಿಚಾರ ಬೇಚಾರ್ಜಿ ಸ್ವಾಮಿಯವರನ್ನು ಕೇಳಬೇಕೆಂದಿದ್ದೇನೆ. ’

ಬೇಚಾರ್ಜಿ ಸ್ವಾಮಿಯವರು ಮೊದಲು ಮೋಢ್ ಬನಿಯರು–ಬಣಜಿಗ ಪಂಗಡಕ್ಕೆ ಸೇರಿದವರು. ಈಗ ಜೈನ ಸನ್ಯಾಸಿಗಳಾಗಿದ್ದರು. ಜೋಶಿಯವರಂತೆ ಇವರೂ ನಮ್ಮ ಮನೆಗೆ ಸಲಹೆಗಾರರು. ಇವರು ನನ್ನ ಪರವಾಗಿ ವಾದಿಸುತ್ತ ‘ ಇವನಿಂದ ಮನಃಪೂರ್ವಕವಾಗಿ ಮೇಲಿನ ಮೂರು ಪ್ರತಿಜ್ಞೆ ಮಾಡಿಸುತ್ತೇನೆ. ಆಮೇಲೆ ಇವನು ಹೊರಡಲು ಅಡ್ಡಿ ಇಲ್ಲವಷ್ಟೇ? ’ ಎಂದರು. ಪ್ರತಿಜ್ಞಾವಿಧಿ ಇವರಿಂದಲೇ ಆಯಿತು. ಹೆಂಡ, ಹೆಂಗಸು, ಮಾಂಸ, ಈ ಮೂರು ವಸ್ತು ಮುಟ್ಟುವುದಿಲ್ಲವೆಂದು ಆಣೆ ಮಾಡಿದೆ. ವಿಲಾಯತಿಗೆ ಹೊರಡಲು ಕೂಡಲೇ ತಾಯಿಯ ಅಪ್ಪಣೆ ದೊರೆಯಿತು.

ನನ್ನ ಸನ್ಮಾನಾರ್ಥವಾಗಿ ಹೈಸ್ಕೂಲಿನವರು ಬೀಳ್ಕೊಡುವ ಸಮಾರಂಭ ಏರ್ಪಡಿಸಿದ್ದರು. ರಾಜಕೋಟೆಯ ಒಬ್ಬ ತರುಣ ಇಂಗ್ಲಂಡಿಗೆ ಹೋಗುವುದು ಆಗ ಅಪರೂಪದ ಮಾತು. ಆಭಾರ ಮನ್ನಣೆಯ ಮಾತನ್ನು ನಾಲ್ಕಾರು ಸಾಲಿನಲ್ಲಿ ಬರೆದು ಒಯ್ದಿದ್ದೆ. ಆದರೆ ಅದನ್ನು ಓದಲು ಬಾಯಿಯೆ ಬರಲಿಲ್ಲ.

## ೮. ಇಂಗ್ಲಂಡಿನಲ್ಲಿ ಮೊಟ್ಟಮೊದಲಿನ ಅನುಭವಗಳು

ಇಂಗ್ಲಂಡಿಗೆ ಹೋಗಲು ನಾನು ಹಡಗು ಏರಿದ್ದು ೧೮೮೮ನೆ ಸಪ್ಟಂಬರ್ ೪ರಲ್ಲಿ. ಹಡಗಿನಲ್ಲಿ ನನಗೆ ಒಮ್ಮೆಯೂ ಓಕರಿಕೆ ಬರಲಿಲ್ಲ. ಆದರೆ ದಿನಗಳೆದಂತೆ ಏನೊ ಒಂದು ಕಳವಳ ಹೆಚ್ಚುತ್ತಲಿತ್ತು. ಹಡಗಿನ ಉಗ್ರಾಣಿಕ (Steward) ನೊಂದಿಗೆ ಮಾತನಾಡಲಿಕ್ಕೂ ನಾಚಿಕೆ. ಇಂಗ್ಲಿಷಿನಲ್ಲಿ ಮಾತನಾಡುವ ರೂಢಿ ಸ್ವಲ್ಪವೂ ಇರಲಿಲ್ಲ. ಎರಡನೆ ತರಗತಿಯ ಪ್ರಯಾಣಿಕರಲ್ಲಿ ಶ್ರೀ. ಮುಜುಮುದಾರರೊಬ್ಬರ ಹೊರತು ಎಲ್ಲರೂ ಇಂಗ್ಲಿಷ್ ಜನ. ಆ ಜನರಲ್ಲಿ ಮಾತನಾಡುವುದು ನನಗೆ ಸಾಧ್ಯವಿರಲಿಲ್ಲ. ಏಕೆಂದರೆ ಅವರು

ಮಾತನಾಡಿದಾಗ ನನಗೆ ಏನೂ ತಿಳಿಯುತ್ತಿರಲಿಲ್ಲ. ತಿಳಿದರೂ ಉತ್ತರ ಕೊಡಲು ಬರುತ್ತಿರಲಿಲ್ಲ. ಮಾತಾಡುವ ಮೊದಲು ಪ್ರತಿಯೊಂದು ವಾಕ್ಯವನ್ನೂ ಮನಸ್ಸಿನಲ್ಲಿ ರಚಿಸಿಕೊಳ್ಳಬೇಕಾಗುತಿತ್ತು. ಊಟಕ್ಕೆ ಮುಳ್ಳು-ಚಮಚ (Fork) ಗಳನ್ನು ಉಪಯೋಗಿಸುವುದು ನನಗೆ ಗೊತ್ತಿರಲಿಲ್ಲ. ಮಾಂಸ ಹಾಕದೆ ಮಾಡಿದ ಪದಾರ್ಥ ಯಾವುದೆಂದು ಕೇಳುವ ಧೈರ್ಯವೂ ಇರಲಿಲ್ಲ. ಆದ್ದರಿಂದ ಮೇಜಿನ ಮೇಲೆ ಎಲ್ಲರೊಡನೆ ನಾನು ಊಟ ಮಾಡುತ್ತಿರಲಿಲ್ಲ; ನನ್ನ ಕೋಣೆಗೇ ತರಿಸುತಿದ್ದೆ. ಜೊತೆಯಲ್ಲಿ ತಂದಿದ್ದ ಹಣ್ಣು, ಸವಿತಿನಿಸು ಇತ್ಯಾದಿಗಳೆ ಆಗಿನ ನನ್ನ ಮುಖ್ಯ ಆಹಾರ. ಶ್ರೀ. ಮುಜುಮುದಾರರಿಗಾದರೊ ಏನೂ ಸಂಕೋಚವಿರಲಿಲ್ಲ. ಅವರು ಎಲ್ಲರೊಡನೆ ಸೇರುತಿದ್ದರು. ಹಡಗಿನ ಪಡಸಾಲೆಯಲ್ಲಿ ಸಂಕೋಚವಿಲ್ಲದೆ ತಿರುಗುತಿದ್ದರು. ನಾನು ಮಾತ್ರ ಇಡೀ ದಿನ ಕೋಣೆಯಲ್ಲಿ ಅಡಗಿರುತ್ತಿದ್ದೆ. ಕೆಲವೇ ಜನರಿದ್ದಾಗ ಪಡಸಾಲೆಗೆ ಹೋಗುವ ಸಾಹಸ ಮಾಡುತಿದ್ದೆ. ಎಲ್ಲರೊಡನೆ ಸೇರಿ ಮಾತನಾಡಲು ನನಗೆ ಶ್ರೀ. ಮುಜುಮುದಾರರು ಪ್ರೋತ್ಸಾಹಿಸುತಿದ್ದರು. ವಕೀಲರ ನಾಲಿಗೆ ಬಹಳ ಚುರುಕಾಗಿರಬೇಕೆಂದು ಅವರು ಹೇಳುತಿದ್ದರು. ಜೊತೆಗೆ ನ್ಯಾಯಶಾಸ್ತ್ರ (Legal) ದ ತಮ್ಮ ಅನುಭವವನ್ನೂ ಹೇಳುತಿದ್ದರು. ಅವರು ನನಗೆ 'ಇಂಗ್ಲಿಷ್ ಮಾತಾಡಲು ಸಿಕ್ಕ ಯಾವ ಸಂದರ್ಭವನ್ನೂ ಬಿಡಬಾರದು. ಮಾತನಾಡುವಾಗ ತಪ್ಪಾದರೆ ಹೆದರಬಾರದು. ಪರಭಾಷೆಯ ಬಳಿಕೆಯಲ್ಲಿ ತಪ್ಪಾಗುವುದು ಸ್ವಾಭಾವಿಕ' ಎಂದು ತಿಳಿಹೇಳುತಿದ್ದರು. ಆದರೆ ನನ್ನ ಮುಟ್ಟಲುಮುರಕ ಸ್ವಭಾವ ಕಡಿಮೆಯಾಗಲೇ ಇಲ್ಲ.

ಒಬ್ಬ ಇಂಗ್ಲಿಷ್ ಸದ್ಗೃಹಸ್ಥರು ಬಹಳ ವಿಶ್ವಾಸವಾಗಿ ನನ್ನೊಡನೆ ಮಾತನಾಡತೊಡಗಿದರು. ಅವರು ನನಗಿಂತ ಹಿರಿಯರು. ನಾನು ಊಟ ಮಾಡಿದ್ದೇನು, ನಾನು ಯಾರು, ಹೋಗುವುದೆಲ್ಲಿಗೆ ಮುಂತಾಗಿ ಅವರು ಹಲವು ಪ್ರಶ್ನೆಮಾಡಿದರು. ಎಲ್ಲರೊಡನೆ ಊಟಕ್ಕೆ ಬರಲಿಕ್ಕೂ ಅವರು ಹೇಳಿದರು. ಮಾಂಸತಿನ್ನದಿರುವ ನನ್ನ ಹಟಕ್ಕೆ ಅವರಿಗೆ ನಗೆ ಬಂತು. ನಮ್ಮ ಹಡಗು ಕೆಂಪುಸಮುದ್ರದಲ್ಲಿ ತೇಲುತ್ತಿದ್ದಾಗ ಅವರು ಸ್ನೇಹಭಾವದಿಂದ ಹೀಗೆ ಹೇಳಿದರು—"ಇಲ್ಲಿಯ ವರೆಗೆ ಹೇಗೂ ಆಯಿತು. ಬಿಸ್ಕೆ ಉಪಸಾಗರ ಸೇರಿದ ಕೂಡಲೇ ಮಾಂಸತಿನ್ನುವುದಿಲ್ಲವೆಂಬ ವಿಚಾರವನ್ನು

ನೀನು ಬದಲಿಸಬೇಕಾಗುವುದು. ಇಂಗ್ಲಂಡು ಬಹಳ ಚಳಿಯ ದೇಶ. ಮಾಂಸವಿಲ್ಲದೆ ಅಲ್ಲಿ ಬದುಕುವುದೇ ಸಾಧ್ಯವಿಲ್ಲ."

"ಆದರೆ ಮಾಂಸವಿಲ್ಲದೆ ಅಲ್ಲಿ ಜನರು ಬದುಕ 'ಬಲ್ಲ' ರೆಂಬುದನ್ನು ನಾನು ಕೇಳಿದ್ದೇನೆ."

"ಅದೆಲ್ಲ ಹುಸಿಮಾತು. ಮಾಂಸ ತಿನ್ನದವರನ್ನು ಯಾರನ್ನೂ ನಾನು ಕಾಣೆ. ಸ್ವತಃ ನಾನೇ ಹೆಂಡ ಕುಡಿಯುತ್ತೇನೆ. ಆದರೆ ನಿನಗೆ ಹಾಗೆ ಮಾಡಲು ಹೇಳುತ್ತೇನೆಯೆ? ನೀನು ಮಾಂಸ ತಿನ್ನಲೇಬೇಕು. ಇಲ್ಲದಿದ್ದರೆ ಬದುಕಲಾರೆ. ಇದು ನನ್ನ ಖಂಡಿತ ಅಭಿಪ್ರಾಯ."

"ನಿಮ್ಮ ಈ ಯೋಗ್ಯ ಸಲಹೆಗೆ ನಾನು ಕೃತಜ್ಞನೆ ಸರಿ. ಆದರೆ ಮಾಂಸ ಮುಟ್ಟುವುದಿಲ್ಲವೆಂದು ತಾಯಿಗೆ ಮಾತು ಕೊಟ್ಟಿದ್ದೇನೆ. ಅದ್ದರಿಂದ ಮಾಂಸ ತಿನ್ನುವುದು ಸಾಧ್ಯವಿಲ್ಲದ ಮಾತು. ಶಾಕಾಹಾರಿಯಾಗಿ ಇಂಗ್ಲಂಡಿನಲ್ಲಿ ಇರುವುದು ಅಸಾಧ್ಯವಾದರೆ ಹಿಂದುಸ್ಥಾನಕ್ಕೆ ಹಿಂದಿರುಗುತ್ತೇನೆ. ಅಲ್ಲಿ ಇರುವುದಕ್ಕಾಗಿ ಎಂದಿಗೂ ಮಾಂಸ ತಿನ್ನಲಾರೆ."

ನಾವು ಬಿಸ್ಕೆ ಕೊಲ್ಲಿ ಸೇರಿದೆವು. ಆದರೆ ಮಾಂಸ-ಮದ್ಯಗಳಲ್ಲಿ ಒಂದೂ ನನಗೆ ಬೇಕೆಂದೆನಿಸಲಿಲ್ಲ.

ಕೊನೆಗೆ ಸೌಥ್ ಹ್ಯಾಂಪ್ಟನ್ ರೇವು ಸೇರಿದೆವು. ಅಂದು ಶನಿವಾರವೆಂದು ತೋರುತ್ತದೆ. ಹಡಗಿನಲ್ಲಿ ನಾನು ತೊಟ್ಟುಕೊಂಡದ್ದು ಕರಿಯ ಉಡುಪು. ಗೆಳೆಯರು ನನಗೆ ಉಣ್ಣೆಯ ಒಂದು ಬಿಳಿ ಬಟ್ಟೆ ಕೊಟ್ಟಿದ್ದರು. ಹಡಗಿನಿಂದ ಇಳಿದ ಮೇಲೆ ಬಳಸಲು ಅದನ್ನು ಮೀಸಲಾಗಿಟ್ಟಿದ್ದೆ. ದಂಡೆ ಸೇರಿದ ಮೇಲೆ ಬಿಳಿ ಉಡುಪೇ ತಕ್ಕದ್ದೆಂದು ತಿಳಿದು ಅಂತಹ ಉಡುಪಿನಿಂದಲೇ ದಂಡೆ ಸೇರಿದೆ. ಆಗ ಸಪ್ಟಂಬರ್ ತಿಂಗಳ ಕೊನೆ. ಎಲ್ಲಿ ನೋಡಿದರೂ ಇಂತಹ ಉಡುಪಿನವನು ನಾನೊಬ್ಬನೆ. ಅನೇಕರು ಬೀಗದ ಕೈ ಸಮೇತವಾಗಿ ಎಲ್ಲ ಸಾಮಾನನ್ನು ಕಂಪನಿಯ ವಶಕ್ಕೆ ಕೊಟ್ಟಿದ್ದರು. ಅದನ್ನು ನೋಡಿ ನಾನೂ ಕೊಟ್ಟೆ.

ನನ್ನಲ್ಲಿ ನಾಲ್ಕು ಪರಿಚಯಪತ್ರಗಳಿದ್ದುವು:—ಡಾ. ಪಿ. ಜೆ. ಮೆಹತಾ ಅವರಿಗೆ, ಶ್ರೀ. ದಲಪತ್‌ರಾಯ್ ಶುಕ್ಲರಿಗೆ, ರಾಜಕುಮಾರ ರಣಜಿತ್ ಸಿಂಹರಿಗೆ, ಮತ್ತು ಹಿಂದುಸ್ತಾನದ ಮುತ್ತಜ್ಜ ದಾದಾಭಾಯಿ ನವರೋಜಿ

ಯುವರಿಗೆ. ಹಡಗಿನಲ್ಲಿ ಯಾರೊ ಲಂಡನ್ನಿನ ವಿಕ್ಟೋರಿಯಾ ಹೋಟೆಲಿನಲ್ಲಿ ತಂಗುವುದು ಅನುಕೂಲವೆಂದು ಹೇಳಿದ್ದರು. ಅದರಂತೆ ನಾನೂ ಶ್ರೀ. ಮುಜುಮುದಾರರೂ ಅಲ್ಲಿಗೆ ಹೋದೆವು. ಬಿಳಿ ಉಡುಪಿನ ಅವಮರ್ಯಾದೆಯೆ ನನಗೆ ಸಾಕಾಗಿತ್ತು. ಮರುದಿನ ಆದಿತ್ಯವಾರವಾದುದರಿಂದ ಕಂಪನಿಯ ವಶಕ್ಕೆ ಕೊಟ್ಟ ಸಾಮಾನು ಸಿಕ್ಕುವಂತಿರಲಿಲ್ಲ. ಇದು ತಿಳಿದೊಡನೆ ನನಗೆ ಪ್ರಾಣವೇ ಹೋದ ಹಾಗಾಯಿತು.

ಸೌಥ್ ಹ್ಯಾಂಪ್ಟನ್ನಿನಿಂದಲೇ ನಾನು ಡಾ. ಮೆಹತಾ ಅವರಿಗೆ ತಂತಿ ಕಳಿಸಿದ್ದೆ. ಅವರು ಅಂದೇ ರಾತ್ರಿ ಸುಮಾರು ಎಂಟು ಗಂಟೆಗೆ ಬಂದರು. ಹೃತ್ಪೂರ್ವಕವಾಗಿ ಅವರು ನನಗೆ ಸ್ವಾಗತವಿತ್ತರು. ನನ್ನ ಈ ಉಣ್ಣೆಯ ಉಡುಪು ಅವರ ಮುಖದ ಮೇಲೆ ಮುಗುಳುನಗೆ ತೇಲಿಸಿತು. ನಮ್ಮಿಬ್ಬರಲ್ಲಿ ಮಾತುಕತೆ ನಡೆದಾಗ ಅವರ ಉದ್ದವಾದ ಟೊಪ್ಪಿಗೆಗೆ ಸಹಜವಾಗಿ ನನ್ನ ಕೈ ಹೋಯಿತು. ಅದು ಬಹಳ ನವುರಾಗಿದ್ದಂತೆ ತೋರಿತು. ಆದ್ದರಿಂದ ಅದರ ಮೇಲೆ ತಿರುವು ಮುರುವಾಗಿ ಕೈಯಾಡಿಸಿದೆ. ಹಾಗೆ ಮಾಡಿದ್ದರಿಂದ ಅದರ ರೇಶಿಮೆ ಎಲ್ಲಾ ಮೇಲಕ್ಕೆ ಎದ್ದುಬಿಟ್ಟಿತು. ಮೆಹತಾ ಅವರು ನಸುಗೋಪದಿಂದ ನೋಡುತ್ತ ನನ್ನ ಕೈ ತಡೆದರು. ಆದರೆ ಆಗಬಾರದ ಕೆಲಸ ಆಗಿಹೋಗಿತ್ತು. ಈ ಘಟನೆ ನನಗೆ ಮುಂದಿನ ನಡೆವಳಿಕೆಗೆ ಎಚ್ಚರಿಕೆಯಾಯಿತು. ಮೆಹತಾ ಅವರ ಸೌಮ್ಯ ತರಹದ ಈ ಸಲಹೆ ಐರೋಪ್ಯರ ರೀತಿ ನೀತಿಗಳನ್ನು ಕಲಿಯುವುದರಲ್ಲಿ ನನಗೆ ಮೊದಲ ಪಾಠವಾಯಿತು. ಅವರು ನನಗೆ ಹೀಗೆ ಹೇಳಿದರು :— "ಇತರರ ಸಾಮಾನು ಮುಟ್ಟಕೂಡದು. ಹಿಂದುಸ್ಥಾನದಲ್ಲಿ ನಾವು ಪ್ರಥಮ ಪರಿಚಯದಲ್ಲೇ ಎಷ್ಟೋ ಪ್ರಶ್ನೆ ಕೇಳುವಂತೆ ಇಲ್ಲಿ ಕೇಳಬಾರದು. ಗಟ್ಟಿಯಾಗಿ ಮಾತಾಡುವುದು ಒಳಿತಲ್ಲ. ಹಿಂದುಸ್ಥಾನದಲ್ಲಿ ಜನರಿಗೆ 'ಸರ್' ಎಂದು ಸಂಬೋಧಿಸುವಂತೆ ಇಲ್ಲಿ ಸಂಬೋಧಿಸಬಾರದು. ಆಳುಗಳೂ ಕೈಕೆಳಗಿನ ಅಧಿಕಾರಿಗಳೂ ತಮ್ಮ ಯಜಮಾನರನ್ನು ಇಲ್ಲಿ ಹಾಗೆ ಕರೆಯುತ್ತಾರೆ" ಇತ್ಯಾದಿ. "ಹೋಟೆಲಿಗೆ ಬಹಳ ದುಡ್ಡು ತೆರಬೇಕಾಗುತ್ತದೆ. ಆದ್ದರಿಂದ ಯಾವುದೊಂದು ಸಂಸಾರದ ಜೊತೆಯಲ್ಲಿರುವುದು ಅನುಕೂಲ" ಎಂದೂ ಅವರು ಹೇಳಿದರು. ಇದನ್ನು ಸೋಮವಾರ ಯೋಚಿಸುವುದೆಂದು ಗೊತ್ತುಮಾಡಿಕೊಂಡೆವು.

ಹೋಟೆಲು ನನಗೂ ಒಗ್ಗಲಿಲ್ಲ, ಮುಜುಮುದಾರರಿಗೂ ಒಗ್ಗಲಿಲ್ಲ. ವೆಚ್ಚವೂ ಹೆಚ್ಚು. ಮಾಲ್ಟಾದಿಂದ ನಮ್ಮೊಂದಿಗೆ ಸಹಪ್ರಯಾಣಿಕರಾಗಿದ್ದ ಸಿಂಧೀ ಗೃಹಸ್ಥರೊಬ್ಬರು ಅದೇ ಹೋಟೆಲಿನಲ್ಲಿದ್ದರು. ಅವರು ಲಂಡನ್ನಿಗೆ ಹೊಸಬರಲ್ಲ. ಇಷ್ಟರಲ್ಲಿ ಅವರಿಗೂ ಮುಜುಮುದಾರರಿಗೂ ಸ್ನೇಹ ಕುದುರಿತ್ತು. ಅವರು ನಮಗಾಗಿ ಬೇರೆ ಸ್ಥಳವನ್ನು ಹುಡುಕಿಕೊಡುವುದಾಗಿ ಹೇಳಿದರು. ಇದಕ್ಕೆ ನಾವು ಒಪ್ಪಿದೆವು. ಸೋಮವಾರ ನಮ್ಮ ಸಾಮಾನು ಸಿಕ್ಕಿದೊಡನೆ, ಹೋಟೆಲಿನ ಎಲ್ಲ ಹಣವನ್ನೂ ಕೊಟ್ಟು ಈ ಸಿಂಧೀ ಗೃಹಸ್ಥರು ನಮಗಾಗಿ ಬಾಡಿಗೆ ಹಿಡಿದ ವಸತಿಗೆ ಹೋದೆವು. ಹೋಟೆಲಿನ ನನ್ನ ವೆಚ್ಚ ಮೂರು ಪೌಂಡಿಗಿಂತ ಹೆಚ್ಚಾದುದು ನನಗೆ ನೆನಪಿದೆ. ಇದರಿಂದ ನನಗೆ ಹೆದರಿಕೆಯಾಯಿತು. ಇಷ್ಟು ದೊಡ್ಡ ಮೊತ್ತ ಕೈಬಿಟ್ಟಿದ್ದರೂ ನನ್ನ ಹಸಿವೆ ಇಂಗಿರಲಿಲ್ಲ. ಏಕೆಂದರೆ ನನಗೆ ಅಲ್ಲಿಯ ಯಾವ ಪದಾರ್ಥವೂ ರುಚಿಸಲಿಲ್ಲ. ಒಂದು ಪದಾರ್ಥ ಒಗ್ಗದಿದ್ದರೆ ಇನ್ನೊಂದನ್ನು ತರಿಸುತಿದ್ದೆ. ಅದರ ಗತಿಯೂ ಅಷ್ಟೇ. ಹೀಗಿದ್ದರೂ ಎರಡರ ಬೆಲೆಯನ್ನೂ ಕೊಡಬೇಕಾಗಿದ್ದಿತು. ಅಂತೂ ನಾನು ಮುಂಬಯಿಯಿಂದ ತಂದ ಬುತ್ತಿಯೆ ನನಗೆ ಪ್ರಯೋಜನವಾಯಿತು.

ಹೊಸ ಕೋಣೆಯೂ ನನಗೆ ಸರಿ ಎನಿಸಲಿಲ್ಲ. ದಿನವೆಲ್ಲವೂ ನನ್ನ ಕಣ್ಣ ಮುಂದೆ ಇದ್ದದ್ದು ನಮ್ಮ ಮನೆ, ನಮ್ಮ ಊರು. ತಾಯಿಯ ಪ್ರೇಮ ನನ್ನನ್ನು ಯಾವಾಗಲೂ ಸೆಳೆಯುತಿತ್ತು. ರಾತ್ರಿಯಲ್ಲೆಲ್ಲ ಕಣ್ಣೀರಿನ ಹೊನಲು ಕೆನ್ನೆಯ ಮೇಲೆ ಹರಿಯುತಿತ್ತು. ಮನೆಯ ಎಲ್ಲಾ ನೆನಪು ಮನಸ್ಸಿನಲ್ಲಿ ಬಂದು ನಿದ್ದೆ ಓಡಿಹೋಗುತಿತ್ತು. ನನ್ನ ದುಃಖ ತೋಡಿಕೊಳ್ಳಲು ಯಾರೂ ಇರಲಿಲ್ಲ. ಇದಲ್ಲದೆ ಹೇಳಿಕೊಂಡರೆ ತಾನೆ ಏನು ಪ್ರಯೋಜನ? ಸಮಾಧಾನವಾಗುವ ಮಾರ್ಗವೇ ನನಗೆ ಕಾಣಲಿಲ್ಲ. ಪ್ರತಿಯೊಂದು ವಸ್ತುವೂ ವಿಚಿತ್ರ—ಜನರು, ಅವರ ನಡೆವಳಿಕೆ, ಅವರ ವಸತಿ, ಯಾವುದೂ ಅದಕ್ಕೆ ಹೊರತಾಗಿರಲಿಲ್ಲ. ಇಂಗ್ಲಿಷ್ ರೀತಿ-ನೀತಿಗಳಿಗೆ ನಾನು ಸಂಪೂರ್ಣ ಹೊಸಬ. ಆದ್ದರಿಂದ ಬಹಳ ಎಚ್ಚರವಾಗಿರಬೇಕು. ಶಾಕಾಹಾರದ ವ್ರತವೊಂದು ಹೆಚ್ಚಿನ ಅನಾನುಕೂಲ. ನಾನು ಉಣ್ಣಬಹುದಾದ ಅಡಿಗೆಗೆ ರುಚಿಯೂ ಇರಲಿಲ್ಲ, ಸಾರವೂ ಇರಲಿಲ್ಲ. ಹೀಗೆ ನನಗೆ ತ್ರಿಶಂಕು ಸ್ವರ್ಗದ

ಅನುಭವವಾಯಿತು. ಇಂಗ್ಲಂಡೋ ನನಗೆ ಒಂಟಿರಲಿಲ್ಲ. ಹಿಂದುಸ್ಥಾನಕ್ಕೆ ಹಿಂದಿರುಗುವಂತಿರಲಿಲ್ಲ. ಆಗ ನನ್ನ ಅಂತರ್ವಾಣಿ ಹೀಗೆ ಹೇಳಿತು :— "ಇಲ್ಲಿಗಂತೂ ಬಂದು ಬಿಟ್ಟಿರುವೆ. ಇನ್ನು ಮೂರು ವರುಷ ಇಲ್ಲಿ ಕಳೆಯಲೇ ಬೇಕು.''

## ೯. ಪ್ರತಿಜ್ಞೆ ಕಾಪಾಡಿತು

ನಾನು ವಿಕ್ಟೋರಿಯಾ ಹೋಟೆಲಿನಲ್ಲಿರಬಹುದೆಂಬ ನಿರೀಕ್ಷಣೆಯಿಂದ ಸೋಮವಾರ ಡಾ. ಮೆಹತಾ ಅವರು ಅಲ್ಲಿಗೆ ಬಂದರು. ಆದರೆ ನಾವು ಬೇರೆ ಸ್ಥಳಕ್ಕೆ ಹೋದದ್ದು ಅವರಿಗೆ ಅಲ್ಲಿ ಗೊತ್ತಾಯಿತು. ಆಮೇಲೆ ನಮ್ಮ ಹೊಸ ವಿಳಾಸ ತಿಳಿದುಕೊಂಡು ಅಲ್ಲಿಗೆ ಬಂದರು. ನನ್ನ ಕೋಣೆಯೂ ಅದರ ವ್ಯವಸ್ಥೆಯೂ ಅವರ ಮನಸ್ಸಿಗೆ ಬರಲಿಲ್ಲ. ಅವರು ತಲೆ ಅಲ್ಲಾಡಿಸಿ ತಮ್ಮ ಅಸಮ್ಮತಿ ಸೂಚಿಸಿದರು. 'ಈ ಸ್ಥಳ ಚೆನ್ನಾಗಿಲ್ಲ. ಬರಿಯ ಪುಸ್ತಕ ವಿದ್ಯೆಗಾಗಿ ಅಲ್ಲ ನಾವು ಇಂಗ್ಲಂಡಿಗೆ ಬರುವುದು. ಪುಸ್ತಕ ವಿದ್ಯೆಗಿಂತ ಹೆಚ್ಚಾಗಿ ಇಂಗ್ಲಿಷ್ ಜೀವನ, ನಡೆನುಡಿ, ಇವನ್ನು ತಿಳಿಯಬೇಕು. ಈ ತಿಳಿವಳಿಕೆಗೆ ನೀನು ಯಾವುದೊಂದು ಕುಟುಂಬದೊಂದಿಗೆ ಇರುವುದು ಮೇಲು. ಆದರೆ ಅದಕ್ಕೂ ಮೊದಲು ತುಸು ಅನುಭವಕ್ಕಾಗಿ ಶ್ರೀ........ರಲ್ಲಿ ಉಮೇದುವಾರನಾಗಿರಬೇಕೆಂದು ನನ್ನ ಅಭಿಪ್ರಾಯ. ಅಲ್ಲಿಗೆ ಬರುವೆಯಾ ನೀನು ?' ಎಂದರವರು.

ಅವರ ಸೂಚನೆಯನ್ನು ಬಹಳ ಕೃತಜ್ಞತೆಯಿಂದ ಒಪ್ಪಿಕೊಂಡು ಆ ಹೊಸ ಸ್ನೇಹಿತರ ಮನೆಗೆ ನನ್ನ ಬಿಡಾರ ಬದಲಾಯಿಸಿದೆ. ಆ ಸ್ನೇಹಿತರು ನನ್ನನ್ನು ಬಹಳ ಆದರದಿಂದ ಬರಮಾಡಿಕೊಂಡರು. ತನ್ನ ತಮ್ಮನಂತೆ ತಿಳಿದು ಇಂಗ್ಲಿಷ್ ಜನರ ರೀತಿ ನಡತೆಗಳನ್ನು ಹೇಳಿಕೊಟ್ಟರು. ಇಂಗ್ಲಿಷ್ ಮಾತಾಡುವುದನ್ನು ಕಲಿಸಿದರು. ನನ್ನ ಊಟ ಒಂದು ದೊಡ್ಡ ಸಮಸ್ಯೆ ಆಯಿತು. ಉಪ್ಪು ಮಸಾಲೆ ಹಾಕದ ಕಾಯಿಪಲ್ಲೆ ನನಗೆ ಸೇರುತ್ತಿರಲಿಲ್ಲ. ನನಗೆ ರುಚಿಸುವ ತಿಂಡಿ ಯಾವುದೆಂದು ತಿಳಿಯಲು ಮನೆಯ ಯಜಮಾನಿ ಬಹಳ ಪ್ರಯತ್ನ ಪಟ್ಟಳು. ಬೆಳಿಗ್ಗೆ ಉಪಾಹಾರಕ್ಕೆ ತೋಕೆ ಗೋದಿಯ

ಅಂಬಲಿ ಮಾಡುತಿದ್ದರು. ಆದರಿಂದ ತಕ್ಕಮಟ್ಟಿಗೆ ಹೊಟ್ಟೆ ತುಂಬುತಿತ್ತು. ಆದರೆ ಮಧ್ಯಾಹ್ನವೂ ರಾತ್ರಿಯೂ ಊಟವೇ ಒಗ್ಗುತ್ತಿರಲಿಲ್ಲ. ಈ ಹೊಸ ಸ್ನೇಹಿತರಾದ ಮನೆಯ ಯಜಮಾನರು ಮಾಂಸ ತಿನ್ನಲು ನನಗೆ ಹೇಳುತ್ತಲೆ ಇದ್ದರು. ನಾನು ಮಾತ್ರ ಯಾವಾಗಲೂ ನನ್ನ ಪ್ರತಿಜ್ಞೆಯನ್ನು ತಿಳಿಸಿ ಸುಮ್ಮನಾಗಿಬಿಡುತ್ತಿದ್ದೆ.

ಹಗಲಿರುಳೂ ಈ ಗೆಳೆಯರು ಮಾಂಸದ ವಿಷಯದಲ್ಲಿ ನನ್ನೊಡನೆ ಚರ್ಚಿಸುತಿದ್ದರು. ಆದರೆ ನನ್ನ ಉತ್ತರ ಮಾತ್ರ ಒಂದೆ— 'ಆಗುವುದಿಲ್ಲ' ಎಂದು. ಅವರು ವಾದಿಸಿದಂತೆಲ್ಲ ನನ್ನ ನಿಶ್ಚಯ ಗಟ್ಟಿಯಾಗುತ್ತ ನಡೆಯಿತು. ನನ್ನ ನಿಶ್ಚಯ ಕದಲದಂತೆ ನಾನು ದಿನವೂ ದೇವರಿಗೆ ಮೊರೆ ಇಡುತ್ತಲಿದ್ದೆ. ಅದು ಸಾರ್ಥಕವೂ ಆಗುತಿತ್ತು. ಇದಕ್ಕೆ, ದೇವರೆಂದರೆ ಏನೆಂಬ ತಿಳಿವಳಿಕೆ ನನಗೆ ಇದ್ದಿತೆಂದು ಅರ್ಥವಲ್ಲ. ನನಗೆ ತಿಳಿದಿದ್ದುದು ದೇವರನ್ನು ಕುರಿತ ವಿಶ್ವಾಸ ಮಾತ್ರ.

ಒಂದು ದಿನ ನನಗೆ ಈ ಗೆಳೆಯರು ಬೆಂಥಾಮ್ ಎಂಬುವವನ 'ಉಪಯುಕ್ತತಾವಾದ' ಎಂಬ ಪುಸ್ತಕ ಓದಿ ಹೇಳತೊಡಗಿದರು. ನನಗೆ ದಿಕ್ಕು ತೋಚದ ಹಾಗೆ ಆಯಿತು. ಅದರ ಭಾಷೆ ಬಹಳ ಗಡಚು. ಅವರು ಅದರ ಅರ್ಥ ವಿವರಿಸತೊಡಗಿದರು. ಆಗ ನಾನು ಅವರಿಗೆ 'ದಯವಿಟ್ಟು ಕ್ಷಮಿಸಿರಿ. ಈ ಗಹನ ವಿಷಯ ನನ್ನ ಯೋಗ್ಯತೆಗೆ ಮೀರಿದ್ದು. ಈ ದೇಶದಲ್ಲಿ ಮಾಂಸ ತಿನ್ನುವುದು ಆವಶ್ಯಕವಿರಬಹುದು. ಆದರೆ ನನ್ನ ವ್ರತವನ್ನು ಸಡಲಿಸಲಾರೆ. ನನಗೆ ಚರ್ಚಿಸುವ ಯೋಗ್ಯತೆ ಇಲ್ಲ. ವಾದದಲ್ಲಿ ನಿಮ್ಮನ್ನು ಸೋಲಿಸಲಾರೆನೆಂದು ನನಗೆ ಖಂಡಿತ ಗೊತ್ತು. ಮೂರ್ಖನೆಂದೊ ಮೊಂಡನೆಂದೊ ತಿಳಿದು ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡಿರಿ. ನೀವು ನನ್ನಲ್ಲಿಟ್ಟಿರುವ ಮಮತೆ ನಾನು ಬಲ್ಲೆ. ನೀವು ನನಗೆ ಒಳಿತನ್ನು ಕೋರುವಿರೆಂಬುದೂ ನಾನು ಬಲ್ಲೆ. ನನ್ನ ವಿಷಯದಲ್ಲಿ ಕನಿಕರವಿರುವುದರಿಂದಲೇ ನೀವು ಇದನ್ನು ಮೇಲಿಂದ ಮೇಲೆ ಹೇಳುವಿರೆಂದೂ ನನಗೆ ಗೊತ್ತು. ಆದರೆ ಇದಕ್ಕೆ ಬೇರೆ ಉಪಾಯವೇ ಇಲ್ಲ. ಪ್ರತಿಜ್ಞೆ ಯಾವಾಗಲೂ ಪ್ರತಿಜ್ಞೆಯೆ. ಅದನ್ನು ಮುರಿಯುವುದು ಸಾಧ್ಯವಿಲ್ಲ' ಎಂದೆ.

ಈ ಸ್ನೇಹಿತರು ಆಶ್ಚರ್ಯದಿಂದ ನನ್ನ ಕಡೆ ನೋಡತೊಡಗಿದರು. ಆ

ಮೇಲೆ ಪುಸ್ತಕ ಮುಚ್ಚಿ 'ಒಳ್ಳೇದು, ಇನ್ನು ಮುಂದೆ ಈ ವಿಷಯ ಎತ್ತು ವುದಿಲ್ಲ' ಎಂದರು. ನನಗೆ ಬಹಳ ಸಂತೋಷವಾಯಿತು. ಆಮೇಲೆ ಅವರು ಈ ಮಾತನ್ನೆ ಎತ್ತಲಿಲ್ಲ. ಆದರೆ ನನಗಾಗಿ ಚಡಪಡಿಸುವುದನ್ನು ಮಾತ್ರ ಬಿಡಲಿಲ್ಲ. ಅವರು ಸಿಗರೇಟು ಸೇದುತಿದ್ದರು; ಹೆಂಡ ಕುಡಿಯುತಿದ್ದರು. ಆದರೆ ಹಾಗೆ ಮಾಡಲು ನನ್ನನ್ನು ಎಂದೂ ಕೇಳಲಿಲ್ಲ. ಮಾತ್ರವಲ್ಲ, ಅವರಿಂದ ದೂರ ಇರಲು ಹೇಳಿದರು. ಅವರಿಗೆ ನನ್ನ ವಿಷಯದಲ್ಲಿ ಒಂದೇ ಚಿಂತೆ— ಮಾಂಸ ತಿನ್ನದೆ ನಾನು ಬಡಕಲಾಗಬಹುದು; ಅದರಿಂದ ನಾನು ಇಂಗ್ಲಂಡಿನಲ್ಲಿ ನೆಮ್ಮದಿಯಾಗಿರಲು ಸಾಧ್ಯವಾಗಲಾರದು ಎಂಬುದು.

ಉಮೇದುವಾರನಾಗಿ ನಾನು ಒಂದು ತಿಂಗಳು ಕಳೆದುದು ಹೀಗೆ.

## ೧೦. ಆಂಗ್ಲ ನಡೆನುಡಿಯ ಅನುಕರಣ

ಇಷ್ಟರಲ್ಲಿ ಈ ಸದ್ಗೃಹಸ್ಥರು ನನ್ನನ್ನು ಒಲಿಸಿಕೊಳ್ಳಲು ಇನ್ನೊಂದು ಹಂಚಿಕೆ ಒಡ್ಡಿದ್ದರು. ಅವರಿಗೆ ನನ್ನ ವಿಷಯದಲ್ಲಿದ್ದ ವಿಶ್ವಾಸ ಅವರನ್ನು ತುಂಬಾ ಯೋಚನೆಗೆ ಈಡುಮಾಡಿತ್ತು. 'ಮಾಂಸಾಹಾರದ ವಿಷಯದಲ್ಲಿ ತನ್ನ ಛಲ ಬಿಡದಿದ್ದರೆ ಇವನು ದುರ್ಬಲನಾಗುವುದು ಖಂಡಿತ. ಇದಲ್ಲದೆ ಹಿಂದುಸ್ಥಾನಕ್ಕೆ ಅಜ್ಞಾನಿಯಾಗಿಯೆ ಹಿಂದಿರುಗಬೇಕಾಗುವುದು. ಏಕೆಂದರೆ ಇಂಗ್ಲಿಷ್ ಸಮಾಜದಲ್ಲಿ ಸರಿಯಾಗಿ ಬೆರೆಯದಿದ್ದರೆ ಸರಿಯಾದ ಪ್ರಯೋಜನ ಹೊಂದುವುದೆಂತು?' ಎಂಬುದು ಅವರ ಯೋಚನೆಗೆ ತಳಹದಿ.

ಇತ್ತ ನನ್ನ ನಿಶ್ಚಯ ಹೀಗಿತ್ತು: 'ನಾನು ಅವರ ಮನಸ್ಸಿನ ಭಾರ ಇಳಿಸಬೇಕು. ಇನ್ನು ಮುಂದೆ ಹೆಬಗನ ಹಾಗೆ ಇರುವುದಿಲ್ಲವೆಂದು ಅವರಿಗೆ ಮನಗಾಣಿಸಬೇಕು. ಇಂಗ್ಲಿಷ್ ನಯವಿನಯವನ್ನು ಮೈಗೂಡಿಸಿಕೊಳ್ಳಲು ಹವಣಿಸಬೇಕು ನನ್ನ ಶಾಕಾಹಾರಿತ್ವ ಅವರಿಗೆ ವಿಚಿತ್ರವಾಗಿ ತೋರಬಹುದು. ಆದರೆ ನಾಗರಿಕ ಸಮಾಜಕ್ಕೆ ತಕ್ಕವನಾಗಲು ಬೇರೆ ರೀತಿಗಳಿಲ್ಲವೆ? ನನ್ನ ಆ ಕೊರತೆ ಇವುಗಳಿಂದ ತುಂಬಿಕೊಳ್ಳಬಹುದು.' ಹೀಗೆ 'ಇಂಗ್ಲಿಷ್ ಜಂಟ್‌ಲ್‌ಮನ್ (ಆಂಗ್ಲ ನಾಗರಿಕ) ಆಗುವ ಕೆಲಸ ಕೈಕೊಂಡೆ. ಇದು ನನ್ನ ಗಂಟಲಿಗೆ ಮೀರಿದ ತುತ್ತಾಗಿತ್ತು.

ಅಲ್ಲಿ ನಾನು ತೊಟ್ಟುಕೊಳ್ಳುತ್ತಿದ್ದ ಬಟ್ಟೆ ಮುಂಬಯಿಯಲ್ಲಿ ಹೊಲಿಸಿದ್ದು. ಇವು ಆಂಗ್ಲಸಮಾಜಕ್ಕೆ ತಕ್ಕವಲ್ಲವೆಂದು ತೋರಿತು. ಆದುದರಿಂದ ಸ್ಟೀಟಾದ ಹೊಲಿಗೆಯವನಿಂದ ಹೊಲಿಸಿದ ಹೊಸ ಬಟ್ಟೆ ಬಂದುವು. ರೇಶಿಮೆಯ ಒಂದು ಟೊಪ್ಪಿಗೆಯನ್ನೂ ತಂದೆ. ನನಗೆ ಇಷ್ಟಕ್ಕೇ ತೃಪ್ತಿಯಾಗಲಿಲ್ಲ. ಬ್ರಾಂಡ್ ಬೀದಿಯಲ್ಲಿ ತಯಾರಾದ 'ಸಂಜೆಯ ಉಡುಪಿ' ಗಾಗಿ ೧೦ ಪೌಂಡು ಹಾಳು ಮಾಡಿದೆ. ಇದಲ್ಲದೆ ಕೈಗಡಿಯಾರಕ್ಕಾಗಿ ಚಿನ್ನದ ಎರಡೆಳೆಯ ಒಂದು ಸರಪಳಿ ಕಳಿಸಲು ವಿಶಾಲಹೃದಯದ ನನ್ನ ಅಣ್ಣನಿಗೆ ಕಾಗದ ಬರೆದೆ. ಸಿದ್ಧಪಡಿಸಿದ ಕಂಠಪಟ್ಟಿ (Neck tie) ಕಟ್ಟಿಕೊಳ್ಳುವುದು ಶಿಷ್ಟಾಚಾರವಲ್ಲವೆಂದು ತಿಳಿದು ಅದನ್ನು ನಾನೇ ಅಂದವಾಗಿ ಕಟ್ಟಿಕೊಳ್ಳುವ ಕಲೆಯನ್ನು ಕಲಿತುಕೊಂಡೆ. ಹಿಂದುಸ್ಥಾನದಲ್ಲಿ ಕನ್ನಡಿ ಉಪಯೋಗಿಸಿಕೊಳ್ಳುತ್ತಿದ್ದುದು ವರ್ತನೆಯ ಕ್ಷೌರಿಕನಿಂದ ಬೋಳಿಸಿಕೊಂಡಾಗ ಮಾತ್ರ. ಆದರೆ ಇಲ್ಲಿ ಪ್ರತಿದಿನವೂ ದೊಡ್ಡ ಕನ್ನಡಿಯ ಎದುರು ನಿಂತು ನನ್ನನ್ನು ನಾನೇ ನೋಡಿಕೊಳ್ಳುತ್ತ, ಕಂಠಪಟ್ಟಿಯನ್ನು ಸರಿಪಡಿಸಿಕೊಳ್ಳುತ್ತ, ಮತ್ತು ಬೈತಲೆಯನ್ನು ತಿದ್ದಿಕೊಳ್ಳುತ್ತ ಹತ್ತು ನಿಮಿಷ ಕಳೆಯುತ್ತಲಿದ್ದೆ. ನನ್ನ ಕೂದಲು ಬಹಳ ಒರಟು. ಆದ್ದರಿಂದ ಅದನ್ನು ಸರಿಯಾಗಿಡಲು ಕುಂಚಿಗೆ (brush) ಯೊಡನೆ ದಿನವೂ ಹೋರಾಡಬೇಕಾಗಿದ್ದಿತು. ಟೊಪ್ಪಿಗೆ ಹಾಕಿಕೊಳ್ಳುವಾಗಲೂ ತೆಗೆದಿಡುವಾಗಲೂ ನನ್ನ ಕೈ ತಪ್ಪದೆ ಬೈತಲೆ ಸರಿಪಡಿಸಿಕೊಳ್ಳಲು ತಲೆಗೆ ಹೋಗುತ್ತಿದ್ದಿತು. ನಾಲ್ಕು ಜನರ ನಡುವೆ ಕುಳಿತಾಗ ಕ್ಷಣಕ್ಕೊಂದು ಸಲ ಬೈತಲೆ ತಿದ್ದಿಕೊಳ್ಳದಿರುವುದು ನಾಗರಿಕತೆಯ ಲಕ್ಷಣವೆ?

ಈ ಸಡಗರ ಇಲ್ಲಿಗೇ ಮುಗಿಯಲಿಲ್ಲ. ನನ್ನ ಮನಸ್ಸು, ಆಂಗ್ಲ ನಾಗರಿಕತನಕ್ಕೆ ಆವಶ್ಯವೆಂದು ತೋರಿದ ಉಳಿದ ಚಿಕ್ಕ ಪುಟ್ಟ ಲಕ್ಷಣಗಳನ್ನು ತಿಳಿದುಕೊಳ್ಳುವುದರಲ್ಲಿ ತೊಡಗಿತು. ಇದಕ್ಕೆಲ್ಲಾ ನರ್ತನ, ಫ್ರೆಂಚ್‌ಭಾಷೆ, ಮತ್ತು ವಾಕ್ಪಟುತ್ವ ಇವು ಅತ್ಯಗತ್ಯವೆಂದು ನನಗೆ ಮೊದಲೇ ತಿಳಿದಿತ್ತು. ಫ್ರೆಂಚ್ ಭಾಷೆ, ಪಕ್ಕದಲ್ಲಿರುವ ಫ್ರಾನ್ಸಿನ ಭಾಷೆ ಮಾತ್ರವಾಗಿರಲಿಲ್ಲ. ಯುರೋಪಿನಲ್ಲಿ ನಾನು ತಿರುಗಾಡಬೇಕೆಂದಿದ್ದ ಉಳಿದ ಪ್ರದೇಶದಲ್ಲಿಯೂ ಬಳಕೆಯಲ್ಲಿದ್ದ ಭಾಷೆ. ನೃತ್ಯದ ಪಾಠಗಳಿಗೆ ಹೋಗಬೇಕೆಂದು ನಿಶ್ಚಯಿಸಿದೆ. ಅದಕ್ಕಾಗಿ ಏರ್ಪಟ್ಟ ಒಂದು ವರ್ಗವನ್ನು ಸೇರಿ ಅದರ ಮೊದಲನೆ ಅವಧಿ (Term) ಯ

ಶುಲ್ಕವೆಂದು ಮೂರು ಪೌಂಡು ಹಣ ಕೊಟ್ಟೆ. ಮೂರು ವಾರಗಳಲ್ಲಿ ಸುಮಾರು ಆರು ಪಾಠಗಳಿಗೆ ನಾನು ಹೋಗಿರಬಹುದು. ಅಷ್ಟರಲ್ಲಿ ತಾಳ ಬದ್ಧ ಚಲನೆಯೂ ನನಗೆ ಬರಲಿಲ್ಲ; ಪಿಯಾನೋ ಬಾರಿಸುವುದನ್ನು ತಿಳಿದು ಕೊಳ್ಳುವುದೂ ಸಾಧ್ಯವಾಗಲಿಲ್ಲ. ಹಾಗಾದರೆ ಮುಂದೇನು? ಸನ್ಯಾಸಿಯ ಕತೆ ಒಂದು ಇದೆ. ಇಲಿಗಳ ಕಾಟ ತಪ್ಪಿಸಲು ಅವನು ಒಂದು ಬೆಕ್ಕು ಸಾಕಿದ ನಂತೆ. ಬೆಕ್ಕಿಗೆ ಹಾಲು ಬೇಕು. ಅದಕ್ಕೊಂದು ಆಕಳು. ಆಕಳು ಸಾಕಲು ಹೆಣ್ಣು ಬೇಡವೆ? ಅದಕ್ಕಾಗಿ ಮದುವೆಯೂ ಆಯಿತು. ನನ್ನ ಸ್ಥಿತಿಯೂ ಸುಮಾರು ಅದರಂತೆ ಆಯಿತು. ಪಾಶ್ಚಾತ್ಯ ಸಂಗೀತ ಜ್ಞಾನವಾಗಬೇಕಾದರೆ ಪಿಟೀಲು ಕಲಿಯುವುದು ಅಗತ್ಯ. ಹೀಗೆ ಪಿಟೀಲಿಗೆ ೩ ಪೌಂಡು, ಕಲಿಸುವ ಶುಲ್ಕಕ್ಕಾಗಿ ಅದಕ್ಕೂ ಸ್ವಲ್ಪ ಹೆಚ್ಚು ವೆಚ್ಚಮಾಡಿದೆ. ಇನ್ನುಳಿದವರು ವಾಕ್ಪಟುತ್ವದ ಶಿಕ್ಷಕರೊಬ್ಬರು. ಅವರಿಗೆ ಆರಂಭದ ಸಂಬಳವೆಂದು ಒಂದು ಗಿನಿ—ಸುಮಾರು ಹದಿನಾರು ರೂಪಾಯಿ–ಕೊಟ್ಟೆ. ಈ ವಾಕ್ಪಟುತ್ವದ ಶಿಕ್ಷಕರು, ಬೆಲ್ಲರು ಬರೆದ 'ಸ್ಟ್ಯಾಂಡರ್ಡ್ ಎಲೊಕ್ಯೂಶನಿಸ್ಟ್' ಎಂಬ ಪುಸ್ತಕವನ್ನು ಪಠ್ಯಪುಸ್ತಕವೆಂದು ಗೊತ್ತುಮಾಡಿದರು. ಅದಕ್ಕೆ ಸಹಾಯಕ ವೆಂದು ಪಿಟ್ಮನ ಕೈಪಿಡಿ [Guide] ಒಂದನ್ನು ತಂದದ್ದಾಯಿತು.

ಆದರೆ ಬೆಲ್ಲರು ನನ್ನ ಕಿವಿಯಲ್ಲಿ ಬೆಲ್ (ಗಂಟೆ) ಬಾರಿಸಿದರು. ನಾನು ಎಚ್ಚತ್ತೆ.

ಜೀವಮಾನವನ್ನೆಲ್ಲ ನಾನು ಇಂಗ್ಲಂಡಿದಲ್ಲಿ ಕಳೆಯಬೇಕಾಗಿದೆಯೆ? 'ಇಲ್ಲ'ವಾದರೆ ವಾಕ್ಚಾತುರ್ಯದಿಂದ ಪ್ರಯೋಜನವೇನು? ಇದಲ್ಲದೆ ಕುಣಿತ ನನ್ನನ್ನು ಸಭ್ಯ ಗೃಹಸ್ಥನನ್ನಾಗಿ ಮಾಡಬಲ್ಲುದೆ? ಹಿಂದುಸ್ಥಾನ ದಲ್ಲಿಯೂ ನಾನು ಪಿಟೀಲು ಕಲಿಯಬಹುದು. ಇಲ್ಲಿ ನಾನಿರುವುದು ವಿದ್ಯಾರ್ಥಿ ಯಾಗಿ. ಆದುದರಿಂದ ವ್ಯಾಸಂಗವನ್ನು ಮುಂದುವರಿಸುವುದು ನನ್ನ ಕರ್ತವ್ಯ. ನಾನು ಮೊದಲು ವಕೀಲನಾಗಬೇಕಾಗಿದೆ. ಸದ್ಗೃಹಸ್ಥನಾಗಬೇಕಾದುದು ನಡತೆಯಿಂದ; ಇಂತಹ ಮಹತ್ವಾಕಾಂಕ್ಷೆಗಳಿಂದಲ್ಲ. ಹೀಗೆ ನನ್ನಲ್ಲಿ ನಾನೆ ನಿರ್ಧರಿಸಿಕೊಂಡೆ.

ಇದನ್ನೆಲ್ಲ ನನ್ನ ವಾಕ್ಪಟುತ್ವದ ಶಿಕ್ಷಕರಿಗೆ ಬರೆದು ತಿಳಿಸಿದೆ. ಇನ್ನು ಮುಂದೆ ನಾನು ಪಾಠಕ್ಕೆ ಬರಲಾರೆನೆಂದು ಅದರಲ್ಲಿ ಬರೆಯಲಾಗಿತ್ತು.

ಅವರಿಂದ ಹೇಳಿಸಿಕೊಂಡ ಪಾಠ ಎರಡೊ ಮೂರೊ? ನೃತ್ಯ ಶಿಕ್ಷಕರಿಗೂ ಹೀಗೆಯೆ ಬರೆದೆ. ಪಿಟೀಲು ಶಿಕ್ಷಕಿಗೆ ಎಲ್ಲವನ್ನೂ ಸಮಕ್ಷಮ ತಿಳಿಸಿ ಪಿಟೀಲನ್ನು ಬಂದಷ್ಟು ಬೆಲೆಗೆ ಮಾರಬೇಕೆಂದು ಬಿನ್ನವಿಸಿದೆ. ಅವಳು ನನ್ನೊಂದಿಗೆ ವಿಶ್ವಾಸವಾಗಿದ್ದಳು. ಆದುದರಿಂದ ನಾನು ಈ ವರೆಗೆ ತಪ್ಪು ಹಾದಿ ಹಿಡಿದಿದ್ದೆನೆಂಬ ತಿಳಿವಳಿಕೆ ನನಗೆ ಹೇಗೆ ಆಯಿತೆಂಬುದನ್ನು ಆಕೆಗೆ ತಿಳಿಸಿದೆ. ನನ್ನ ಈ ನಿಶ್ಚಯಕ್ಕೆ ಆಕೆ ಬೆಂಬಲಕೊಟ್ಟಳು.

ನನಗೆ ಈ ಹುಚ್ಚು ಸುಮಾರು ಮೂರು ತಿಂಗಳು ಹಿಡಿದಿರಬಹುದು. ಉಡುಪಿನ ಸಡಗರ ಮಾತ್ರ ನನ್ನಲ್ಲಿ ಬಹಳ ವರುಷ ಮನೆಮಾಡಿಕೊಂಡಿತ್ತು. ಆದರೆ ಅಂದಿನಿಂದ ನಾನು ವಿದ್ಯಾರ್ಥಿಯಾದೆ.

## ೧೧. ದಿನಕ್ಕೆ ಒಂದು ಶಿಲಿಂಗು ಮೂರು ಪೆನಿ

ಕುಣಿತ ಮುಂತಾದುವನ್ನು ಕಲಿಯಲು ಬಯಸಿದ್ದರಿಂದ ನಾನು ಸ್ವೇಚ್ಛಾವರ್ತಿಯಾದೆನೆಂದು ಯಾರೂ ತಿಳಿಯದಿರಲಿ. ಇದರಲ್ಲಿ ಒಂದು ಉದ್ದೇಶವಿದ್ದುದು ಓದುಗರು ಕಾಣಬಹುದು. ಆದ್ದರಿಂದ ಅವಶ್ಯವೆನಿಸಿದಾಗ ಈ ಬದಲಾವಣೆ ಸುಲಭಸಾಧ್ಯವಾಯಿತು.

ನಾನು ನನ್ನ ಇರುವಿಕೆಯನ್ನು ಬಹಳ ಸೂಕ್ಷ್ಮವಾಗಿ ನಿರೀಕ್ಷಿಸುತಿದ್ದೆ. ಆಗ ನನಗೆ ಮಿತವ್ಯಯ ಅಗತ್ಯವೆಂದು ತೋರಿತು. ಆದ್ದರಿಂದ ವೆಚ್ಚ ಅರ್ಧಕ್ಕೆ ಇಳಿಸುವುದನ್ನು ಗೊತ್ತುಮಾಡಿದೆ. ಓಡಾಟದ ಬಾಡಿಗೆಗೆಂದು ಅತಿಶಯ ಹಣ ಕೈಬಿಟ್ಟದ್ದು ಲೆಕ್ಕದಿಂದ ಗೊತ್ತಾಗುತಿದ್ದಿತು. ನಾನು ಬೇರೊಂದು ಸಂಸಾರದೊಂದಿಗೆ ಇರುತ್ತಿದ್ದೆನಷ್ಟೆ? ಅವರಿಗೆ ವಾರಕ್ಕೊಮ್ಮೆ ತಪ್ಪದೆ ಕೊಡಬೇಕಾದ ಮೊತ್ತ ಬೇರೆ.

ಆದುದರಿಂದ ಇನ್ನು ಮುಂದೆ ಯಾವುದೊಂದು ಸಂಸಾರದ ಆಶ್ರಯದಲ್ಲಿರುವ ಬದಲು ಸ್ವತಂತ್ರವಾದ ಬಾಡಿಗೆಯ ಕೋಣೆ ಗೊತ್ತುಮಾಡುವುದು; ನಾನು ಕೆಲಸ ಮಾಡುವ ಸ್ಥಳ ಬದಲಾದಂತೆ ಕೋಣೆಯನ್ನೂ ಅದಕ್ಕೆ ಹತ್ತಿರದಲ್ಲಿಯೆ ಬದಲಿಸುವುದು; ಇದರಿಂದ ಸಿಕ್ಕುವ ಅನುಭವ ಪಡೆಯುವುದು; ಎಂದು ಯೋಚಿಸಿದೆ. ಯಾವಾಗಲೂ ಕೆಲಸದ

ಸ್ಥಳವನ್ನು ಕಾಲುನಡಿಗೆಯಿಂದ ಅರ್ಧ ಗಂಟೆಯೊಳಗೆ ಮುಟ್ಟುವಷ್ಟು ಹತ್ತಿರದಲ್ಲಿ ನನ್ನ ಬಿಡಾರವಿರುತಿತ್ತು. ಇದರಿಂದ ಬಹಳ ಹಣ ಉಳಿತಾಯ ವಾಗುತ್ತಿತ್ತು ಇದಕ್ಕೂ ಮೊದಲು, ಎಲ್ಲಿಗೆ ಹೊರಟರೂ ವಾಹನದ ಮೇಲೆಯೆ. ತಿರುಗಾಟಕ್ಕೆ ವಿೂಸಲಾದ ಬೇರೆ ಹೊತ್ತೇ ಬೇಕಾಗುತಿದ್ದಿತು. ನಡಿಗೆ ಮಿತವ್ಯಯುಗಳು ಕೂಡಿದ ಈ ಹೊಸ ವ್ಯವಸ್ಥೆಯಿಂದ ಹಣದ ಉಳಿತಾಯುವಾಯಿತು. ದಿನಕ್ಕೆ ೮–೧೦ ಮೈಲು ತಿರುಗಾಟವಾಯಿತು. ಇಂಗ್ಲಂಡಿನಲ್ಲಿರುವ ವರೆಗೆ ನಾನು ಬೇನೆಬೀಳದಿದ್ದುದಕ್ಕೆ ಮತ್ತು ತಕ್ಕಮಟ್ಟಿಗೆ ಗಟ್ಟಿ ಮುಟ್ಟಾಗಿ ಇದ್ದುದಕ್ಕೆ ಈ ನಡಿಗೆಯೆ ಕಾರಣ.

ನಾನು ಬಾಡಿಗೆ ಹಿಡಿದುದು ಸಾಲುಕೋಣೆ—ಕುಳಿತಿರಲು ಒಂದು, ಮಲಗಲು ಇನ್ನೊಂದು. ಬಿಡಾರದ ವಿಷಯದಲ್ಲಿ ಇದು ಎರಡನೆ ಮೆಟ್ಟು (Stage). ಮೂರನೆಯದು ಇನ್ನೂ ಮುಂದೆ ಇದೆ.

ಈ ಬದಲಾವಣೆಯಿಂದ ನನಗೆ ಅರ್ಧದಷ್ಟು ಹಣ ಉಳಿತಾಯುವಾಯಿತು. ಆದರೆ ಹೊತ್ತನ್ನು ಹೊಂದಿಸಿಕೊಳ್ಳುವುದೆಂತು? ವಕೀಲತನದ ಪರೀಕ್ಷೆಗೆ ಹೆಚ್ಚಿನ ಓದು ಅಗತ್ಯವಿರಲಿಲ್ಲ. ಆದ್ದರಿಂದ ಹೊತ್ತು ಸಾಲದೆಂಬ ಅನುಮಾನವಿಲ್ಲ. ನನ್ನ ಹರಕು ಇಂಗ್ಲಿಷು ನನಗೆ ಯಾವಾಗಲೂ ಬೇಸರಕ್ಕೆ ಕಾರಣವಾಗಿದ್ದಿತು. ಆದ್ದರಿಂದ ನಾನು ವಕೀಲನಾಗುವುದು ಮಾತ್ರವಲ್ಲ; ಯಾವುದೊಂದು ಸಾಹಿತ್ಯಪದವಿಯನ್ನೂ ಪಡೆಯಬೇಕು ಎಂದುಕೊಂಡೆ. ಆದಕ್ಕಾಗಿ ಆಕ್ಸ್‌ಫರ್ಡ್ ಮತ್ತು ಕೆಂಬ್ರಿಜ್ ವಿಶ್ವವಿದ್ಯಾಲಯಗಳ ಅಭ್ಯಾಸ ಕ್ರಮ ತಿಳಿದುಕೊಂಡೆ. ಕೆಲವು ಸ್ನೇಹಿತರ ಅಭಿಪ್ರಾಯವನ್ನೂ ತಿಳಿದು ಕೊಂಡೆ. ಈ ಎರಡರಲ್ಲಿ ಯಾವ ವಿದ್ಯಾಲಯ ಸೇರಿದರೂ ಹೆಚ್ಚು ವೆಚ್ಚಕ್ಕೆ ಸಿದ್ಧನಾಗಿರಬೇಕು. ಈಗ ಗೊತ್ತಾದುದಕ್ಕಿಂತ ಹೆಚ್ಚು ದಿನ ಇಂಗ್ಲಂಡಿನಲ್ಲಿ ಕಳೆಯಬೇಕು. ಹೆಚ್ಚು ಪರಿಶ್ರಮದ ಪರೀಕ್ಷೆಯಲ್ಲಿ ತೇರ್ಗಡೆಯಾಗುವ ಇಚ್ಛೆ ಇದ್ದರೆ ಲಂಡನ್ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯೆ ಯೋಗ್ಯವೆಂದು ಒಬ್ಬ ಸ್ನೇಹಿತರು ಸೂಚಿಸಿದರು. ಇದಕ್ಕೆ ತಕ್ಕಷ್ಟು ಪರಿಶ್ರಮ ಮುಖ್ಯ ವಾದುದು; ಬರುವ ಅನುಭವ ಬಹಳ; ವೆಚ್ಚ ಕಡಿಮೆ. ಈ ಸೂಚನೆ ನನಗೆ ರುಚಿಸಿತು. ಆದರೆ ಪರೀಕ್ಷಾ ವಿಷಯ (Syllabus) ಗಳಿಗೆ ಸ್ವಲ್ಪ ಹೆದರಿದೆ. ಲ್ಯಾಟಿನ್ನೂ ಆಧುನಿಕ ಭಾಷೆ ಒಂದೂ ಕಡ್ಡಾಯದ ವಿಷಯಗಳು! ಲ್ಯಾಟಿನ್

ಭಾಷೆ ಕಲಿಯುವುದೆಂತು? ಈ ಸ್ನೇಹಿತರು ಲ್ಯಾಟಿನ್ ಭಾಷೆಯ ಅವಶ್ಯಕತೆ ಒತ್ತಿ ಹೇಳಿದರು— "ವಕೀಲರಿಗೆ ಲ್ಯಾಟಿನ್ ಅತ್ಯಗತ್ಯ. ಅದನ್ನು ಕಲಿಯುವುದರಿಂದ ಕಾನೂನಿನ ಅರ್ಥ ಸುಲಭವಾಗುತ್ತದೆ. ರೋಮನ್ ಕಟ್ಟಳೆಗೆ ಸಂಬಂಧಪಟ್ಟ ಒಂದು ಪ್ರಶ್ನೆಪತ್ರಿಕ ಇರುವುದು ಲ್ಯಾಟಿನ್ನಿನಲ್ಲಿ. ಇದಲ್ಲದೆ, ಲ್ಯಾಟಿನ್ ಭಾಷಾಜ್ಞಾನವೆಂದರೆ ಇಂಗ್ಲಿಷ್ ಭಾಷೆಯ ಪ್ರಭುತ್ವ" ಎಂದು ಅವರು ಹೇಳಿದರು. ಈ ಮಾತು ನನ್ನ ಮನಸ್ಸನ್ನು ತಟ್ಟಿತು. ಎಷ್ಟು ಕಷ್ಟವಾದರೂ ಲ್ಯಾಟಿನ್ ಕಲಿಯಲೇಬೇಕು ಎಂದು ನಿಶ್ಚಯ ಮಾಡಿಕೊಂಡೆ. ಫ್ರೆಂಚ್ ಭಾಷೆಯ ಕಲಿಕೆ ಈಗಾಗಲೇ ಮೊದಲಾಗಿತ್ತು. ಪರೀಕ್ಷೆಗೆ ಬೇಕಾದ ಆಧುನಿಕ ಭಾಷೆ ಇದೇ ಆಗಬಹುದಲ್ಲ? ಆಮೇಲೆ ಯಾವುದೊ ಒಂದು ಖಾಸಗಿ ಮ್ಯಾಟ್ರಿಕ್ಯುಲೇಶನ್ ವರ್ಗಕ್ಕೆ ಸೇರಿದೆ ಪರೀಕ್ಷೆ ನಡೆಯುತ್ತಿದ್ದುದು ಆರು ತಿಂಗಳಿಗೊಮ್ಮೆ. ಆದರೆ ಈಗ ಉಳಿದುದು ಐದು ತಿಂಗಳು ಮಾತ್ರ. ಇಷ್ಟು ಚಿಕ್ಕ ಅವಧಿ ನನ್ನ ಯೋಗ್ಯತೆಗೆ ಮೀರಿದ ಮಾತಾಗಿತ್ತು. ಆದರೆ ಆಂಗ್ಲ ನಾಗರಿಕನಾಗಬೇಕೆಂಬ ಮಹತ್ವಾಕಾಂಕ್ಷೆಯಿದೆಯಲ್ಲ, ಅದರಿಂದ ನಾನು ಶ್ರದ್ಧಾವಂತನಾದ ವಿದ್ಯಾರ್ಥಿಯಾದೆ. ಒಂದು ನಿಮಿಷವೂ ವ್ಯರ್ಥ ಹೋಗದಂತೆ ವೇಳಾಪತ್ರಿಕೆ ರಚಿಸಿದ್ದಾಯಿತು. ಇಷ್ಟು ಸ್ವಲ್ಪ ಅವಧಿಯಲ್ಲಿ ಫ್ರೆಂಚ್ ಲ್ಯಾಟಿನ್ನುಗಳನ್ನೂ ಉಳಿದ ವಿಷಯಗಳನ್ನೂ ಅರಗಿಸಿಕೊಳ್ಳುವುದೆಂತು? ನನ್ನ ಬುದ್ಧಿ ಶಕ್ತಿ, ಜ್ಞಾಪಕಶಕ್ತಿ, ಎರಡೂ ಅಷ್ಟು ಕುದುರಿರಲಿಲ್ಲ. ಹೀಗಾಗಿ ಲ್ಯಾಟಿನ್ನಿನಲ್ಲಿ ತೇರ್ಗಡೆ ಆಗಲಿಲ್ಲ. ಇದಕ್ಕೆ ನಾನು ಮರುಗಿದರೂ ಎದೆಗೆಡಲಿಲ್ಲ. ಲ್ಯಾಟಿನ್ನಿನಲ್ಲಿ ನನಗೆ ಅಭಿರುಚಿ ಉಂಟಾಗಿತ್ತು. ಇನ್ನೊಮ್ಮೆ ಏಕೆ ಪರೀಕ್ಷೆಯ ಪ್ರಯತ್ನ ಇಡಬಾರದು? ಅದರಿಂದ ಫ್ರೆಂಚ್ ಭಾಷಾಜ್ಞಾನ ಇನ್ನಷ್ಟು ಹೆಚ್ಚುವುದು. ಇದು ನನ್ನ ಯೋಚನೆಯಾಗಿತ್ತು. ಇದಲ್ಲದೆ ವಿಜ್ಞಾನವಿಭಾಗದಲ್ಲಿ ಇನ್ನೊಂದು ವಿಷಯ ಅಭ್ಯಸಿಸಬೇಕೆಂದೂ ತೋರಿತು. ಪ್ರಯೋಗಗಳ ಅಭಾವದಿಂದ, ಹೈಸ್ಕೂಲಿನಲ್ಲಿ ತೆಗೆದುಕೊಂಡಿದ್ದ ರಸಾಯನ ಶಾಸ್ತ್ರ ನನಗೆ ಸಪ್ಪೆಯಾಗಿ ತೋರಿತ್ತು. ಹಿಂದುಸ್ಥಾನದ ಸಾಲೆಗಳಲ್ಲಿ ರಸಾಯನ ಶಾಸ್ತ್ರ ಕಡ್ಡಾಯದ ಒಂದು ವಿಷಯ. ಆದ್ದರಿಂದ ಇಲ್ಲಿ ಲಂಡನ್ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗೂ ಮೊದಲ ಸಲ ಅದನ್ನೆ ತೆಗೆದುಕೊಂಡಿದ್ದೆ. ಈ ಸಲ ಅದರ ಬದಲು "ಕಾವು ಮತ್ತು ಬೆಳಕು'' ಐಚ್ಛಿಕ ವಿಷಯವನ್ನಾಗಿ ಆಯ್ದುಕೊಂಡೆ. ಇದು ಸುಲಭವಾದ ವಿಷಯವೆಂದು ಜನರು

ಹೇಳುತಿದ್ದರು. ನನಗೂ ಹಾಗೆಯೆ ತೋರಿತು.

ಪರೀಕ್ಷೆಗೆ ಕಟ್ಟುವುದರ ಜೊತೆಗೆ ನನ್ನ ಜೀವನದ ರೀತಿಯನ್ನು ಇನ್ನೂ ಸರಳವಾದುದನ್ನಾಗಿ ಮಾಡಲು ಹೆಣಗಿದೆ. ಲಂಡನ್ನಿನೊಳಗಿನ ನನ್ನ ಜೀವನದ ರೀತಿ ನಮ್ಮ ಕುಟುಂಬದ ಯೋಗ್ಯತೆಯ ಮಟ್ಟಕ್ಕೆ ಇನ್ನೂ ಇಳಿದಿಲ್ಲವೆಂದು ನನಗೆ ತೋರಿತು ಮನೆಯಲ್ಲಿ ತಾನು ಪೇಚಾಡುತ್ತ ದುಡ್ಡಿನ ನನ್ನ ಎಲ್ಲ ಬೇಡಿಕೆಗಳನ್ನು ಉದಾರತನದಿಂದ ಪೂರೈಸುತ್ತಿರುವ ಅಣ್ಣನ ಪಾಡು ನನ್ನ ಬಗೆಯನ್ನು ಕದಡಿತು. ಲಂಡನ್ನಿನಲ್ಲಿ ತಿಂಗಳಿಗೆ ೧೦-೧೫ ಪೌಂಡು ವೆಚ್ಚಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನದ ಅನುಕೂಲವಿತ್ತು. ನನಗಿಂತ ಸಾದಾತನದಿಂದ ಬಾಳುವವರನ್ನೂ ನೋಡಿದ್ದೆ. ನನಗಿಂತ ತೀರ ಬಡತನದಲ್ಲಿ ದಿನಗಳೆಯುತ್ತಲಿದ್ದ ವಿದ್ಯಾರ್ಥಿಗಳ ಗುರುತೂ ನನಗಿತ್ತು. ಅದರಲ್ಲಿ ಒಬ್ಬನಿದ್ದದ್ದು ಹೊಲೆಗೇರಿಯಲ್ಲಿ. ಅವನು ಕೊಡುತ್ತಿದ್ದ ಬಾಡಿಗೆ ವಾರಕ್ಕೆ ಎರಡು ಶಿಲಿಂಗು. ಎರಡು ಪೆನಿ—ಸುಮಾರು ಎರಡು ಆಣೆ—ಕೊಟ್ಟು ಹೋಟೆಲಿನಿಂದ ತಂದ ಕೋಕೊ ಮತ್ತು ರೊಟ್ಟಿಯೆ ಅವನ ಒಪ್ಪೊತ್ತಿನ ಊಟ. ಅವನೊಡನೆ ಸ್ಪರ್ಧಿಸುವುದು ನನಗೆ ಮೀರಿದ ಕೆಲಸ. ಆದರೆ ನನಗೆ ಎರಡು ಕೋಣೆಗಳೇಕೆ? ಮತ್ತು ಚಿಕ್ಕ ಪುಟ್ಟ ತಿಂಡಿ ಇಲ್ಲಿಯೆ ಮಾಡಿಕೊಳ್ಳಬಾರದೇಕೆ? ಇದರಿಂದ ಆಗಬಹುದಾದ ಉಳಿತಾಯ ತಿಂಗಳಿಗೆ ೪-೫ ಪೌಂಡು. ಇದನ್ನೆಲ್ಲಾ ಯೋಚಿಸಿ ಸರಳಜೀವನದ ಕೆಲವು ಪುಸ್ತಕಗಳನ್ನು ಓದಿದೆ. ಜೋಡುಕೋಣೆಯ ಬದಲಾಗಿ ಒಂದೇಕೋಣೆ ತೆಗೆದುಕೊಂಡೆ. ಒಂದು ಅಗ್ಗಿಷ್ಟಿಕೆಯನ್ನು ತಂದು ಬೆಳಗಿನ ಗಂಜಿಯನ್ನು ನಾನೇ ಕುಚ್ಚತೊಡಗಿದೆ. ಈ ಕ್ರಮಕ್ಕೆ ೨೦ ನಿಮಿಷಗಳಿಗಿಂತ ಹೆಚ್ಚು ಬೇಕಾಗುತಿರಲಿಲ್ಲ. ಜವೆಗೋದಿಯ ಅಂಬಲಿ ಬೇಯಿಸಿ ಕೋಕೋವಿಗಾಗಿ ನೀರು ಕಾಯಿಸಲು ಇಷ್ಟು ಹೊತ್ತು ಸಾಲದೆ? ಮಧ್ಯಾನ್ಹದ ಊಟ ಹೊಟೆಲಿನಲ್ಲಿ. ರಾತ್ರಿಯ ಊಟ ಬಿಡಾರದಲ್ಲೇ—ರೊಟ್ಟಿ ತಿಂದು ಕೋಕೋ ಕುಡಿಯುವುದು. ಹೀಗೆ ದಿನಕ್ಕೆ ಒಂದು ಶಿಲಿಂಗು, ಮೂರು ಪೆನಿ (ಸುಮಾರು ಹದಿನೈದು ಆಣೆ) ಗಳಲ್ಲಿ ನನ್ನ ದಿನದ ಬಾಳುವೆ ಸಾಗುತಿತ್ತು. ಹೆಚ್ಚು ಅಭ್ಯಾಸ ಮಾಡಬೇಕಾದುದೂ ಇದೇ ಅವಧಿಯಲ್ಲಿ. ಸಾದಾ ಜೀವನದಿಂದ ವೇಳೆಯ ಉಳಿತಾಯ ಬಹಳವಾಯಿತು. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದೆ.

ಈ ತರಹದ ಸರಳತನದಿಂದ ನನ್ನ ಬಾಳುವೆ ಸಪ್ಪೆ ಆಯಿತೆಂದು ಯಾವ ಓದುಗನೂ ತಿಳಿಯಕೂಡದು. ಇದರಿಂದ ಆಂತರಿಕ ಹಾಗೂ ಬಾಹ್ಯಜೀವನ ಎರಡೂ ಸಮರಸವಾದುವು. ನನ್ನ ಜೀವನ ಹೆಚ್ಚು ಸತ್ಯಮಯವಾಯಿತು; ಆತ್ಮವು ಆನಂದಮಯವಾಯಿತು.

## ೧೨. ವಿಲೋಭನದಿಂದ ಪಾರಾದೆ

ನನ್ನ ಜೀವನದ ಮಾರ್ಪಾಡು ಆಹಾರದ ಬದಲಾವಣೆಗೂ ಕಾರಣ ವಾಯಿತು. ನಾನು ಶಾಕಾಹಾರದ ಎಲ್ಲ ವಿಷಯವನ್ನೂ ಅಭ್ಯಾಸ ಮಾಡಿದೆ. ಇಂಗ್ಲಂಡಿನ ಒಂದು ಶಾಕಾಹಾರಿ ವಾರಪತ್ರಿಕೆಗೆ ಚಂದಾದಾರನಾದೆ. ಶಾಕಾ ಹಾರಿ ಸಂಘದ ಸದಸ್ಯನಾಗಿ ಅದರ ಕಾರ್ಯಕಾರಿ ಮಂಡಲಿಯಲ್ಲಿಯೂ ಸೇರಿದೆ. ಕಜ್ಜಾಯ, ಮಸಾಲೆ ಮುಂತಾದುವನ್ನು ಬಿಟ್ಟುಬಿಟ್ಟೆ. ಚಹ, ಕಾಫಿ ಕುಡಿಯುವುದನ್ನು ನಿಲ್ಲಿಸಿ ಬಿಟ್ಟೆ, ಕೋಕೊ ಮತ್ತು ಕುಚ್ಚಿದ ಕಾಯಿ ಪಲ್ಯವನ್ನು ಮೆಲ್ಲತೊಡಗಿದೆ. ರುಚಿಯ ಮೂಲ ನಾಲಗೆಯಲ್ಲ, ಮನಸ್ಸು ಎಂದು ಈ ಪ್ರಯೋಗಗಳಿಂದ ನನಗೆ ತಿಳಿಯಿತು.

ಹಲವು ಧರ್ಮಗಳ ಪರಿಚಯವನ್ನು ನಾನು ಮಾಡಿಕೊಂಡೆ. ಈ ಅವಧಿಯಲ್ಲಿ ನನಗೆ ಇಬ್ಬರು ಬ್ರಹ್ಮಸಮಾಜದವರು ಸಿಕ್ಕಿದರು. ನಾನು ಭಗವದ್ಗೀತೆ ಮೊದಲ ಸಲ ಓದುವಂತೆ ಮಾಡಿದವರು ಇವರೆ. ಇವರ ಉಪ ಕಾರವನ್ನು ನಾನು ಮರೆಯುವುದೆಂತು? ತಮ್ಮೊಡನೆ ಸರ್. ಎಡ್ವಿನ್ ಆರ್ನಾಲ್ಡರು ಬರೆದ ಗೀತೆಯ ಭಾಷಾಂತರ ಓದಲು ಇವರು ನನ್ನನ್ನು ಕರೆದರು. ನನಗೆ ನಾಚಿಕೆಯಾಗಿ ಅವರಿಗೆ 'ನಾನು ಈ ವರೆಗೆ ಭಗವದ್ಗೀತೆ— ಇದು ನಮ್ಮ ಅತಿ ಪವಿತ್ರಗ್ರಂಥ—ಓದಿಲ್ಲ. ಅದರ ಭಾಷಾಂತರವನ್ನೂ ಓದಿಲ್ಲ. ನಿಮ್ಮೊಡನೆ ಅದನ್ನು ಓದಿ ನನ್ನಿಂದಾದ ನೆರವು ಕೊಡಲು ಸಿದ್ಧನಿದ್ದೇನೆ' ಎಂದು ಹೇಳಿದೆ. ಹೀಗೆ ಅವರ ಜೊತೆಯಲ್ಲಿ ಇಂಗ್ಲಿಷ್ ಗೀತೆಯನ್ನು ಓದ ತೊಡಗಿದೆ. ಎರಡನೆ ಅಧ್ಯಾಯದ ಈ ಕೆಳಗಿನ ಶ್ಲೋಕಗಳು ನನ್ನ ಮನಸ್ಸಿನಲ್ಲಿ ಗಾಢಪರಿಣಾಮ ಮಾಡಿದವು. ನನ್ನ ಕಿವಿಯಲ್ಲಿ ಅವು ಇನ್ನೂ ನಿನದಿಸುತ್ತಿವೆ.

ಧ್ಯಾಯತೊ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೆ ।
ಸಂಗಾತ್ ಸಂಜಾಯತೆ ಕಾಮಃ ಕಾಮಾತ್ ಕ್ರೋಧೋಭಿಜಾಯತೇ ॥
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ॥
ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿ ನಾಶಾತ್ ಪ್ರಣಶ್ಯತಿ ॥

(ಮನುಷ್ಯನು ವಿಷಯವನ್ನು ಯೋಚಿಸುತ್ತಾ ಇದ್ದರೆ ಮೊದಲು ಅವನಿಗೆ ಅದರ ಬಗೆಗೆ ಆಕರ್ಷಣೆ ಉಂಟಾಗುತ್ತದೆ. ಆ ಆಕರ್ಷಣೆಯಿಂದ ಅದನ್ನು ಹೊಂದಬೇಕೆಂಬ ಇಚ್ಛೆ ಉಂಟಾಗುತ್ತದೆ. ಅದು ದೊರಕದಿದ್ದರೆ ಆ ಇಚ್ಛೆ ಕ್ರೋಧದಲ್ಲಿ ಕೊನೆಗೊಳ್ಳುತ್ತದೆ. ಆಮೇಲೆ ಕೋಧ ಅವಿವೇಕ ದಲ್ಲಿಯೂ ಅವಿವೇಕ ಸ್ಮೃತಿಭ್ರಂಶದಲ್ಲಿಯೂ ಸ್ಮೃತಿಭ್ರಂಶ ಬುದ್ಧಿನಾಶನ ದಲ್ಲಿಯೂ ಕೊನೆಗೊಳ್ಳುತ್ತದೆ. ಬುದ್ಧಿನಾಶನದಿಂದ ಕೊನೆಗೆ ಮನುಷ್ಯನೆ ಹಾಳಾಗುತ್ತಾನೆ.)

ಈ ಪುಸ್ತಕ ಅಮೌಲ್ಯವಾದುದು ಎನಿಸಿತು. ನಿರಾಶೆಯ ವಾತಾವರಣ ದಲ್ಲಿ ನನಗೆ ಈ ಪುಸ್ತಕದಿಂದ ದೊರೆತ ನೆರವು ಅಷ್ಟಿಷ್ಟಲ್ಲ.

ನಾನು ಬೈಬಲ್ ಓದಿದ್ದೂ ಸುಮಾರು ಇದೇ ಹೊತ್ತಿಗೆ. ಅದನ್ನು ಓದಲು ಸಲಹೆ ಕೊಟ್ಟವರು ಮ್ಯಾಂಚೆಸ್ಟರಿನ ಒಬ್ಬ ಸ್ನೇಹಿತರು. ಹಳೆಯ ಒಡಂಬಡಿಕೆ (Old Testament) ಯೊಳಗಿನ ಕೆಲವು ಭಾಗ ಅಂತೂ ಇಂತೂ ಓದಿ ಮುಗಿಸಿದೆ. ಆದರೆ ಹೊಸ ಒಡಂಬಡಿಕೆಗೆ (New Testament) ನನ್ನ ಮನಸ್ಸು ಸೋತುಹೋಯಿತು. ಅದರೊಳಗಿನ 'ದಿ ಸೆರ್ಮನ್ ಆಫ್ ದಿ ಮೌಂಟ್'— ಏಸೂ ಕ್ರಿಸ್ತ ಗುಡ್ಡದ ಮೇಲೆ ಮಾಡಿದ ಉಪದೇಶ—ನನಗೆ ಹುಚ್ಚನ್ನೆ ಹಿಡಿಸಿಬಿಟ್ಟಿತು. ಅದನ್ನು ನಾನು ಗೀತೆಗೆ ಹೋಲಿಸಿದೆ. 'ಅಪ ಕಾರಿಗಳಿಗೆ ಪ್ರತಿಕಾರ ಮಾಡಬೇಡಿರಿ. ಯಾರಾದರೂ ನಿಮ್ಮ ಬಲಕೆನ್ನೆಗೆ ಹೊಡೆದರೆ ಎಡ ಕೆನ್ನೆಯನ್ನೂ ಒಡ್ಡಿರಿ.' ಈ ಉಪದೇಶದಿಂದ ನನಗೆ ಮಿತಿ ಮೀರಿದ ಸಂತೋಷವಾಯಿತು. ಆಗ ನನಗೆ, ಹಿಂದಿನ ಒಂದು ಅಧ್ಯಾಯದಲ್ಲಿ ಎತ್ತಿ ತೋರಿಸಿದ ಗುಜರಾತಿ ಕವಿ ಶಾಮುಲಭಟ್ಟನ 'ಗುಟುಕು ನೀರು ಕೊಟ್ಟವನಿಗೆ ಹೊಟ್ಟೆ ತುಂಬಾ ಉಣಬಡಿಸು" ಎಂಬ ನುಡಿ ನೆನಪಾಯಿತು.

ನನಗೆ ಹಿಂದೂ ಧರ್ಮ ಮತ್ತು ಉಳಿದ ಧರ್ಮಗಳ ಪರಿಚಯ ಮಸಕು ಮಸಕಾಗಿತ್ತು. ಆದರೆ ಸತ್ಯ ಪರೀಕ್ಷೆಯ ಕಾಲದಲ್ಲಿ ಈ ಜ್ಞಾನ ಸಾಲದೆಂಬ ತಿಳಿವು ಇರಲಿಲ್ಲ.

ಇಂಗ್ಲಂಡಿನಲ್ಲಿದ್ದ ಕೊನೆಯ ವರುಷ ಪೋರ್ಟ್ಸ್‌ಮೌತಿನಲ್ಲಿ ಶಾಕಾಹಾರಿಗಳ ಕೂಟವೊಂದು ಜರುಗಿತು. ಅದಕ್ಕೆ ನನಗೂ ನನ್ನ ಒಬ್ಬ ಸ್ನೇಹಿತರಿಗೂ ಆಮಂತ್ರಣವಿತ್ತು. ನಮಗೆ ತಂಗಲು ಸ್ವಾಗತ ಸಮಿತಿಯವರು ಯಾವುದೊ ಒಂದು ಮನೆ ಗೊತ್ತುಮಾಡಿದ್ದರು. ಆ ಮನೆಯ ಸ್ಥಿತಿಗತಿ ಅವರಿಗೆ ತಿಳಿದಿರಲಿಲ್ಲ. ಆ ಮನೆ ದುರ್ನಡತೆಯವರಿಗೆ ಸೇರಿದ್ದು. ಊಟವಾದ ಮೇಲೆ ನಾವು ಇಸ್ಪೀಟು ಆಟಕ್ಕೆ ತೊಡಗಿದ್ದೆವು. ಆ ಮನೆಯ ಒಡತಿಯೂ ಅದರಲ್ಲಿ ಬಂದು ಸೇರಿದಳು. ಆಟವೆಂದಮೇಲೆ ಎಲ್ಲರೂ ಸರಸ, ನಗೆ-ಚೇಷ್ಟೆ ಮಾಡುವುದುಂಟು. ಆದರೆ ಇಲ್ಲಿ ನನ್ನ ಈ ಸ್ನೇಹಿತನಿಗೂ ಆ ಗೃಹಿಣಿಗೂ ಅಶ್ಲೀಲ ಚೇಷ್ಟೆಗಾರಂಭವಾಯಿತು. ಈ ಪ್ರಲೋಭನದಲ್ಲಿ ಸೇರಬೇಕೆಂಬ ಹುಚ್ಚು ನನಗೂ ಹೊಕ್ಕಿತು. ಇನ್ನು ನಾನು ಇಸ್ಪೀಟು ಎಲೆ ಅಲ್ಲಿಯೆ ಒಗೆದು ಆಟ ನಿಲ್ಲಿಸಿ ಕುಚೇಷ್ಟೆ ಆರಂಭ ಮಾಡುವವನು. ಅಷ್ಟರಲ್ಲಿ ಈ ಗೆಳೆಯ “ಈ ದುರ್ಬುದ್ಧಿ ನಿನಗೆ ಎಲ್ಲಿಂದ ಬಂತು? ನಡೆ, ದೂರ ಸರಿ” ಎಂದ. ಈ ಗೆಳೆಯನ ಅಮೃತಮುಖದಿಂದ ಹೊರಟ ಈ ಹರಕೆಗೆ ದೇವರ ಪ್ರೇರಣೆಯೆ ಕಾರಣವಲ್ಲದಿದ್ದರೆ ಮತ್ತೇನು?

ನನ್ನ ಮುಖ ನಾಚಿಕೆಯಿಂದ ಕಪ್ಪಿಟ್ಟಿತು. ಈ ಬುದ್ಧಿವಾದದಿಂದ ಎಚ್ಚರಗೊಂಡೆ. ಈ ಗೆಳೆಯನನ್ನು ಮನಸ್ಸಿನಲ್ಲಿಯೆ ಹೃತ್ಪೂರ್ವಕವಾಗಿ ವಂದಿಸಿದೆ. ತಾಯಿಯ ಎದುರು ಮಾಡಿದ ಪ್ರತಿಜ್ಞೆಯ ನೆನಪಾಯಿತು ನನಗೆ. ಕೂಡಲೇ ಅಲ್ಲಿಂದ ಹೊರಟುಬಿಟ್ಟೆ.

ಧರ್ಮ, ದೇವರು, ಎಂದರೆ ಏನು; ದೇವರ ಕ್ರಿಯಾಶಕ್ತಿ ನಮ್ಮಲ್ಲಿ ತೋರುವುದು ಹೇಗೆ; ಎಂಬದು ಅದಕ್ಕೂ ಮೊದಲು ನನಗೆ ತಿಳಿದಿರಲಿಲ್ಲ. ಆ ಪ್ರಸಂಗದಲ್ಲಿ ಕಾಪಾಡಿದವನು ದೇವರು ಎಂಬುದು ನನಗೆ ತಿಳಿದದ್ದೂ ಅಸ್ಪಷ್ಟವಾಗಿ ಮಾತ್ರ. ದೇವರ ರಕ್ಷಣೆ ನನಗೆ ಹಲವಾರು ಸಲ ಸಿಕ್ಕಿದೆ. “ನೆರವೊದಗದೆ ಸೊಗಗುಂದಿ” ಸಂಪೂರ್ಣ ನಿರಾಶನಾಗಿ ಕುಳಿತಾಗ ಎಲ್ಲಿಂದಲೊ ನೆರವು ಸಿಗುತ್ತಿರುವುದು ನನ್ನ ಅನುಭವ. ಬಿನ್ನಹ, ಉಪಾಸನೆ, ಪ್ರಾರ್ಥನೆ, ಇವು ಮೂಢತನದ ಲಕ್ಷಣವಲ್ಲ. ಇದು ಸತ್ಕ್ರಿಯೆ-ಉಣ್ಣುವುದು, ಕುಡಿಯುವುದು, ಕುಳ್ಳಿರುವುದು, ಇಲ್ಲವೆ ನಡೆಯುವುದು ಈ ಎಲ್ಲ ಕ್ರಿಯೆಗಿಂತ ನೈಜವಾದ ಕರ್ಮ. ಇದೇ ಸತ್ಯ, ಉಳಿದುದೆಲ್ಲ ಮಿಥ್ಯ ಎಂಬುದು ಅತಿಶಯೋಕ್ತಿಯಲ್ಲ.

# ೧೩. ವಕೀಲನಾಗಿ ಮರಳಿ ಬಂದೆ

ಈ ಅವಧಿಯಲ್ಲಿ ನಾನು ಅಭ್ಯಾಸ ಮರೆತಿರಲಿಲ್ಲ. ಹೀಗೆ ಒಂಬತ್ತು ತಿಂಗಳು ಸತತವಾಗಿ ಓದಿದ ಮೇಲೆ ೧೮೯೧ನೇ ಜೂನ್ ೧೦ ರಲ್ಲಿ ವಕೀಲನಾದೆ. ಅದೇ ೧೨ನೇ ತಾರೀಕಿನ ದಿನ ಹಡಗಿನಿಂದ ಹಿಂದುಸ್ಥಾನಕ್ಕೆ ಹೊರಟೆ. ಆಗ ನನಗೆ ಹಿಂದೀ ಕಾನೂನಿನ ಅಜ್ಞಾನದ ಭೀತಿ, ಕೆಲಸ ದೊರೆಯುವುದೋ ಇಲ್ಲವೋ ಎಂಬ ಭಯ ಇದ್ದೇ ಇತ್ತು. ಏಡನ್ ದಾಟಿದ ಮೇಲೆ ಸಿಕ್ಕುವ ದಾರಿ ಬಿರುಗಾಳಿಯದು. ದಾರಿಯಲ್ಲಿ ನಿರೋಗಿಯಾಗಿದ್ದವನು ನಾನೊಬ್ಬನೇ. ಬಹುತರ ಉಳಿದ ಎಲ್ಲ ಪ್ರಯಾಣಿಕರು ಬೇನೆ ಬಿದ್ದಿದ್ದರು. ಬಿರುಗಾಳಿಯ ಅಲ್ಲೋಲಕಲ್ಲೋಲ, ಹೆದ್ದೆರೆಗಳು ದುಮ್ಮಿಕ್ಕುತಿರುವ ಬೆಡಗು, ಇದೆಲ್ಲ ವನ್ನೂ ಹಡಗಿನ ಅಂಗಳದಲ್ಲಿ ನಿಂತು ಸವಿಯುತ್ತಲಿದ್ದೆ. ಬೆಳಗಿನ ಉಪಾಹಾರಕ್ಕೆ ನನ್ನ ಹೊರತು ಒಬ್ಬಿಬ್ಬರು ಮಾತ್ರ ಇರುತಿದ್ದರು. ಉಪಾಹಾರಕ್ಕಾಗಿ ಜವೆಗೋದಿಯ ಅಂಬಲಿಯ ತಟ್ಟೆಯನ್ನು ನಾವು ತೊಡೆಯ ಮೇಲಿಟ್ಟು ಕೊಂಡಿರುತಿದ್ದೆವು. ಹಡಗಿನ ಹೊಯ್ದಾಟಕ್ಕೆ ಅದು ಎಲ್ಲಿ ಉರುಳುವುದೋ ಎಂದು ನಮಗೆ ದಿಗಿಲು. ಆದ್ದರಿಂದ ಅದನ್ನು ಅಲ್ಲಿಯೇ ಜಾಗರೂಕತೆಯಿಂದ ಹಿಡಿದಿರುತಿದ್ದೆವು.

ಈ ಹೊರಗಿನ ಬಿರುಗಾಳಿ ಮುಂದೆ ನನ್ನ ಹೃದಯದಲ್ಲಿ ಏಳಬಹುದಾದ ಬಿರುಗಾಳಿಯ ಕುರುಹು. ಹೊರಗಿನ ಬಿರುಗಾಳಿ ನನ್ನನ್ನು ಕಳವಳಗೊಳಿಸಲಿಲ್ಲ. ಅದರಂತೆ ಒಳಗಿನದೂ ನನ್ನ ಮನಸ್ಸನ್ನು ಕದಡಿಸಲಿಲ್ಲವೆಂದೇ ಹೇಳಬೇಕು.

ನನ್ನನ್ನು ಕಾಣಲು ನನ್ನ ಅಣ್ಣ ತಡಿಗೆ ಬಂದಿದ್ದ. ನಮ್ಮ ತಾಯಿ ಈ ಮೊದಲೇ ತೀರಿಕೊಂಡಿದ್ದಳು. ಆ ಸುದ್ದಿ ನನಗೆ ಇಲ್ಲಿ ಗೊತ್ತಾಯಿತು. ಆಕೆಯ ಮರಣದ ಸುದ್ದಿ ನಮ್ಮ ಅಣ್ಣ ನನಗೆ ತಿಳಿಯಗೊಟ್ಟಿರಲಿಲ್ಲ. ದೂರದ ಪರದೇಶದಲ್ಲಿ ನಾನು ಈ ಆಘಾತಕ್ಕೆ ಒಳಗಾಗಬಾರದೆಂದು ಅಣ್ಣನ ಇಚ್ಛೆ. ಹೇಗಿದ್ದರೂ ಇದು ನನ್ನನ್ನು ಹಣ್ಣುಮಾಡಿತು. ನಮ್ಮ ತಂದೆಯ ಸಾವಿನ ದುಃಖಕ್ಕಿಂತ ಇದು ಹೆಚ್ಚಿನ ದುಃಖ. ನನ್ನ ಹೃದಯದಲ್ಲಿ ಮನೆ ಮಾಡಿಕೊಂಡಿದ್ದ ಹಲವಾರು ಕೋರಿಕೆಗಳು ನುಚ್ಚುನೂರಾದುವು. ಆದರೆ

ದುಃಖವನ್ನು ಹೊರಗೆ ತೋರಗೊಡದಿದ್ದುದು ನನಗೆ ನೆನಪಿದೆ. ಉಕ್ಕಿ ಬರುವ ಕಣ್ಣೀರನ್ನು ನಾನು ಒಳಗೇ ಅದುಮಿಕೊಂಡಿದ್ದೆ. ಶೋಕಸೂಚಕ ವಾದ ಯಾವ ಸಂಗತಿಗೂ ಎಡೆಗೊಡದೆ ನನ್ನ ಬದುಕು ಎಂದಿನಂತೆ ಸಾಗಿತು.

ಕೆಲವು ದಿನ ನಾನು ರಾಜಕೋಟೆಯಲ್ಲಿದ್ದೆ. ಅಷ್ಟರಲ್ಲಿ ಕೆಲವು ಸ್ನೇಹಿತರಿಂದ 'ನೀನು ಹೈಕೋರ್ಟಿನ ಅನುಭವ ಪಡೆಯಬೇಕು. ಹಿಂದೀ ಕಾನೂನು ಪದ್ಧತಿಯು ನಿನಗೆ ತಿಳಿಯಬೇಕಾದದ್ದೇ. ಆದ್ದರಿಂದ ಸ್ವಲ್ಪಕಾಲ ನೀನು ಮುಂಬಯಿಗೆ ಹೋಗುವುದು ಒಳಿತು. ಅಲ್ಲಿ ನಿನ್ನ ವಕೀಲತನ ಕುದುರಬಹುದೇನೋ ಎಂದು ತಿಳಿದುಕೊಳ್ಳಲೂ ಅನುಕೂಲ' ಎಂದು ಸಲಹೆ ಬಂತು. ಅವರ ಸೂಚನೆ ನನಗೆ ಒಪ್ಪಿಗೆಯಾದುದರಿಂದ ನಾನು ಮುಂಬಯಿಗೆ ಹೋದೆ.

ಆದರೆ ಅಲ್ಲಿ ನನ್ನ ವೆಚ್ಚ ಬೆಳೆಯುತ್ತಲೇ ಇದ್ದಿತು. ಅದನ್ನು ಬಾಯಿ ಗೂಡಿಸುವಷ್ಟು ದುಡಿಮೆ ನನಗೆ ಸಿಗಲಿಲ್ಲ. ಆದ್ದರಿಂದ ನಾಲ್ಕೈದು ತಿಂಗಳಿ ಗಿಂತ ಹೆಚ್ಚು ಅಲ್ಲಿ ಇರಲಾಗಲಿಲ್ಲ.

ಮುಂಬಯಿಯಲ್ಲಿ ನಿರಾಶನಾಗಿ ನಾನು ರಾಜಕೋಟೆ ಸೇರಿದೆ. ಅಲ್ಲಿ ಸ್ವತಂತ್ರವಾಗಿ ವಕೀಲತನವನ್ನು ಹೂಡಿದೆ. ಇಲ್ಲಿ ನನ್ನ ಹುಟ್ಟುವಳಿ ತಕ್ಕ ಮಟ್ಟಿಗೆ ಹೆಚ್ಚಿತು. ಅರ್ಜಿ ಮುಂತಾದವುಗಳನ್ನು ಬರೆದುಕೊಡುತ್ತಲಿದ್ದೆ. ಅದರಿಂದ ನನಗೆ ದೊರೆಯುತಿದ್ದುದು ತಿಂಗಳಿಗೆ ಸರಾಸರಿ ೩೦೦ ರೂಪಾಯಿ. ಇಷ್ಟು ಕೆಲಸ ದೊರೆಯಲು ನನ್ನ ಯೋಗ್ಯತೆಗಿಂತ ಇತರರ ವರ್ಚಸ್ಸು ಹೆಚ್ಚು ಕಾರಣ. ನಮ್ಮ ಅಣ್ಣನೊಂದಿಗೆ ಪಾಲಿನಿಂದ ವಕೀಲತನ ಮಾಡು ತಿದ್ದ ಒಬ್ಬ ವಕೀಲರಿಗೆ ಒಳ್ಳೆಯ ವರಮಾನವಿತ್ತು. ಅವರು ಮುಖ್ಯ ಅರ್ಜಿಗಳನ್ನು– ಅಥವಾ ಹಾಗೆ ತೋರಿದವುಗಳನ್ನು–ದೊಡ್ಡ ಬ್ಯಾರಿಸ್ಟರರ ಕಡೆಗೆ ಕಳಿಸುತಿದ್ದರು. ಬಡ ಕಕ್ಷಿಗಾರರಿಗಾಗಿ ಬರೆಯಬೇಕಾದುವು ನನ್ನ ಪಾಲಿನವು.



# ೧೪. ದಕ್ಷಿಣ ಆಫ್ರಿಕೆಗೆ ಪಯಣ

ಕಾಠೇವಾಡಿನ ಕುತಂತ್ರದ ವಾತಾವರಣದಿಂದ ನನಗೆ ಕುತ್ತುಸುರು ಬಟ್ಟಂತಾಯಿತು. ಅಷ್ಟರಲ್ಲಿ, ಪೋರ್ ಬಂದರಿನ ಒಂದು ದೊಡ್ಡ ಅಂಗಡಿಯವರು ದಕ್ಷಿಣ ಆಫ್ರಿಕೆಗೆ ಹೋಗಲು ನನ್ನನ್ನು ಕೇಳಿದರು. ನಾನು ಸಂತೋಷದಿಂದ ಒಪ್ಪಿಕೊಂಡೆ. ದಕ್ಷಿಣ ಆಫ್ರಿಕೆಯಲ್ಲಿ ೪೦ ಸಾವಿರ ಪೌಂಡುಗಳ ಒಂದು ದೊಡ್ಡ ವ್ಯಾಜ್ಯ ನಡೆಯುತಿದ್ದಿತು. ಈ ವ್ಯಾಜ್ಯ ಹೂಡಿದವರು ದಾದಾ ಅಬ್ದುಲ್ಲಾ ಕಂಪೆನಿಯವರು. ಪ್ರತಿವಾದಿಗಳು ತಯಬ್ ಹಾಜಿಖಾನ್ ಮಹಮದ್. ನನ್ನನ್ನು ದಕ್ಷಿಣ ಆಫ್ರಿಕೆಗೆ ಹೊರಡಲು ಕೇಳಿದವರು ದಾದಾ ಅಬ್ದುಲ್ಲಾ ಕಂಪೆನಿಯ ಪಾಲುಗಾರರೊಬ್ಬರು, ಎಂದರೆ ವಾದಿಯ ಕಡೆಯವರು. 'ದಕ್ಷಿಣ ಆಫ್ರಿಕೆಗೆ ಬಂದರೆ ಅಲ್ಲಿಯ ನಿಮ್ಮ ಎಲ್ಲ ವೆಚ್ಚ, ವರ್ಷಕ್ಕೆ ೧೦೫ ಪೌಂಡು, ಮತ್ತು ಹೋಗಿ ಬರಲು ಮೊದಲನೆ ತರಗತಿಯ ತಿಕೆಟು, ಇಷ್ಟನ್ನು ಕೊಡುವೆ'ವೆಂದು ಅವರು ಹೇಳಿದರು. ಆದ್ದರಿಂದ ನಾನು ಎಪ್ರಿಲ್ ೧೮೯೩ ರಲ್ಲಿ ಹಿಂದುಸ್ಥಾನದಿಂದ ದಕ್ಷಿಣ ಆಫ್ರಿಕೆಗೆ ಹೊರಟೆ.

ಡರ್ಬನ್ ನೇತಾಳಿನ ರೇವುಪಟ್ಟಣ. ನನ್ನನ್ನು ಕರೆದೊಯ್ಯಲು ಅಬ್ದುಲ್ಲಾ ಸೆಟ್ಟರು ಅಲ್ಲಿಗೆ ಬಂದಿದ್ದರು. ಹಡಗು ರೇವಿನ ಕಟ್ಟೆಯ ಹತ್ತಿರ ಬಂದಿತು. ಜನರು ತಮ್ಮ ತಮ್ಮ ಆಪ್ತೇಷ್ಟರನ್ನು ಕಾಣಲು ಬರುತಿದ್ದರು. ಅಲ್ಲಿ, ಯುರೋಪಿನ ಜನರು ಹಿಂದೀಯರನ್ನು ಕೊಂಚ ಅನಾದರದಿಂದ ಕಾಣುತ್ತಿರುವಂತೆ ತೋರಿತು. ಅಬ್ದುಲ್ಲಾ ಸೆಟ್ಟರ ಗುರುತಿನ ಐರೋಪ್ಯರು ತಮ್ಮ ಮೇಲ್ತನವನ್ನು ಅವರಲ್ಲಿ ತೋರಿಸುತಿದ್ದುದು ನನಗೆ ಕಾಣದಿರಲಿಲ್ಲ. ಇದು ನನ್ನ ಮನಸ್ಸನ್ನು ಚುಚ್ಚಿತು. ಈ ನಡತೆಗೆ ಅಬ್ದುಲ್ಲಾ ಸೆಟ್ಟರ ಮನಸ್ಸು ದಡ್ಡುಗಟ್ಟಿತ್ತು. ನನ್ನನ್ನು ನೋಡುತ್ತಿದ್ದವರಿಗೆ ಒಂದು ತರಹದ ಕುತೂಹಲ. ನನ್ನ ಉಡುಪು ಉಳಿದ ಭಾರತೀಯರಂತಿರಲಿಲ್ಲ. ಆದ್ದರಿಂದ ನಾನು ಎದ್ದು ಕಾಣುತಿದ್ದೆ. ನಾನು ಹಾಕಿಕೊಂಡದ್ದು ಫ್ರಾಕ್ ಕೋಟು, ತಲೆಗೆ ರುಮಾಲು. ರುಮಾಲು ಬಂಗಾಲಿನ ಪಗಡಿಯ ತರಹದ್ದು.

ನಾವು ಅಂಗಡಿಯ ಮಳಿಗೆಗೆ ಹೋದೆವು. ಅಬ್ದುಲ್ಲಾ ಸೆಟ್ಟರ ಕೋಣೆಯ ಬದಿಗೆ ನನಗಾಗಿ ಬಿಡಾರ ಗೊತ್ತುಮಾಡಿದ್ದರು. ನನ್ನ ಮಾತು ಅಬ್ದುಲ್ಲಾ

ಸೆಟ್ಟರಿಗೆ ತಿಳಿಯದು, ಅವರ ಮಾತು ನನಗೆ ತಿಳಿಯದು. ನಾನು ತಂದ ಅವರ ತಮ್ಮನ ಕಾಗದಗಳನ್ನು ಅವರು ಓದಿದರು. ಅವರಿಗೆ ಇನ್ನೂ ಸೋಜಿಗವಾಯಿತು. ತನ್ನ ತಮ್ಮ ತನ್ನಲ್ಲಿ ಕಳಿಸಿದ್ದು ಒಂದು ಬಿಳಿ ಆನೆ ಯೆಂದು ತಿಳಿದುಕೊಂಡಿರಬೇಕು ಅವರು. ನನ್ನ ಉಡುಪು, ಇರುವ ರೀತಿ, ಎಲ್ಲವೂ ಐರೋಪ್ಯರಂತೆ ಬಹಳ ವೆಚ್ಚದ್ದು. ಆಗ ನನಗೆ ಕೊಡಬೇಕಾದ ಕೆಲಸವೇನೂ ಇರಲಿಲ್ಲ. ನ್ಯಾಯಾಸ್ಥಾನದಲ್ಲಿ ನಡೆಯುತಿದ್ದ ಅವರ ವ್ಯವಹಾರ ಟ್ರಾನ್ಸ್‌ವಾಲಿನಲ್ಲಿ. ಒಡನೆಯೇ ನನ್ನನ್ನು ಅಲ್ಲಿ ಕಳಿಸುವುದರಿಂದ ಪ್ರಯೋಜನವಿರಲಿಲ್ಲ. ಇದಲ್ಲದೆ ನನ್ನ ಯೋಗ್ಯತೆ, ಪ್ರಾಮಾಣಿಕತನಗಳ ಬಗೆಗೆ ಅವರಿಗೆ ಮನವರಿಕೆ ಹೇಗಾಗಬೇಕು? ನನ್ನ ಮೇಲೆ ಕಣ್ಣಿಡಲು ಅವರು ಪ್ರಿಟೋರಿಯಾ– ಟ್ರಾನ್ಸ್‌ವಾಲಿನ ರಾಜಧಾನಿ–ಯಲ್ಲಿರುವಂತಿರಲಿಲ್ಲ. ಪ್ರತಿವಾದಿಗಳು ಬೇರೆ ಪ್ರಿಟೋರಿಯದಲ್ಲಿದ್ದಾರೆ. ಅವರು ನನ್ನನ್ನು ಒಳ ಗೊಳಗೆ ತಮ್ಮಂತೆ ಮಾಡಿಕೊಂಡರೆ ಹೇಗೆ? ಈ ವ್ಯವಹಾರಕ್ಕೆ ಸಂಬಂಧಿಸಿದ ಕೆಲಸ ಕೊಡದಿದ್ದರೆ ನನಗೆ ಕೊಡಬಹುದಾದ ಬೇರೆ ಕೆಲಸ ಯಾವುದು? ಉಳಿದ ಕೆಲಸವನ್ನು ಗುಮಾಸ್ತರು ನನಗಿಂತ ಚೆನ್ನಾಗಿ ಮಾಡಬಲ್ಲರು. ಅವರ ತಪ್ಪಿಗೆ ಶಿಕ್ಷೆಯಿದೆ. ನನ್ನ ತಪ್ಪಿಗೆ? ಆದ್ದರಿಂದ ವ್ಯವಹಾರಕ್ಕೆ ಸಂಬಂಧಪಟ್ಟ ಕೆಲಸವನ್ನು ನನಗೆ ಕೊಡಲಾಗದಿದ್ದರೆ ನನ್ನ ಪ್ರಯೋಜನ ವೇನು? ನನ್ನನ್ನು ಕೆಲಸವಿಲ್ಲದೆ ಸಾಕಬೇಕಾಗುವುದು.

ಅಬ್ದುಲ್ಲಾ ಸೆಟ್ಟರಿಗೆ ಅಕ್ಷರಜ್ಞಾನವಿರಲಿಲ್ಲ. ಆದರೆ ಅವರ ಅನುಭವ ಸಂಪತ್ತು ಬಹಳ ದೊಡ್ಡದು; ಬುದ್ಧಿ ಬಹಳ ಚುರುಕು. ಅದನ್ನು ಅವರೂ ಬಲ್ಲರು. ಅವರಿಗೆ ಬಳಿಕೆಯ ಬಲದಿಂದ ಮಾತನಾಡುವಷ್ಟು ಇಂಗ್ಲಿಷು ಬರುತಿತ್ತು. ಇಷ್ಟರಿಂದ, ಕೊಡುಕೊಳ್ಳುವುದನ್ನೂ ಬ್ಯಾಂಕ್ ಆಡಳಿತ ಗಾರರೊಂದಿಗೆ ಮತ್ತು ಐರೋಪ್ಯ ವ್ಯಾಪಾರಿಗಳೊಂದಿಗೆ ವ್ಯವಹಾರವನ್ನೂ ಅವರು ಮಾಡುತಿದ್ದರು; ವಕೀಲರಿಗೆ ತಮ್ಮ ಮೊಕದ್ದಮೆಯನ್ನು ವಿವರಿಸು ತಿದ್ದರು. ಹೀಗೆ ಎಲ್ಲ ವ್ಯವಹಾರವೂ ತಕ್ಕಮಟ್ಟಿಗೆ ನಡೆಯುತಿದ್ದಿತು. ಇವರ ವಿಷಯದಲ್ಲಿ ಹಿಂದೀಯರಿಗೆ ಮನ್ನಣೆ ಬಹಳ. ಅಲ್ಲಿಯ ಭಾರತೀ ಯರ ಅಂಗಡಿಗಳಲ್ಲಿ ಇವರ ಅಂಗಡಿ ದೊಡ್ಡದು. ದೊಡ್ಡ ಅಂಗಡಿಗಳಲ್ಲಿ ಒಂದೆಂಬುದು ಖಂಡಿತ.

ನಾನು ಡರ್ಬನ್ ತಲುಪಿದ ಎರಡನೇ ಅಥವಾ ಮೂರನೆಯ ದಿನ ಡರ್ಬನ್ ನ್ಯಾಯಾಸ್ಥಾನ ನೋಡಲು ಅವರು ನನ್ನನ್ನು ಕರೆದೊಯ್ದರು. ಅಲ್ಲಿ ಕೆಲವು ಜನರ ಪರಿಚಯ ಮಾಡಿಕೊಟ್ಟು ತಮ್ಮ ವಕೀಲರ ಪಕ್ಕದಲ್ಲಿಯೇ ನನ್ನನ್ನು ಕುಳ್ಳಿರಿಸಿದರು. ನ್ಯಾಯಾಧೀಶರು ನನ್ನನ್ನು ದಿಟ್ಟಿಸಿ ನೋಡುತ್ತ ತಲೆಯ ಮೇಲಿನ ರುಮಾಲು ತೆಗೆದಿಡಬೇಕೆಂದು ಸ್ಪಷ್ಟವಾಗಿ ಹೇಳಿದರು. ನಾನು ಅದನ್ನು ನಿರಾಕರಿಸಿ ಅಲ್ಲಿಂದ ಹೊರಗೆ ಬಂದುಬಿಟ್ಟೆ.

ಹೀಗೆ ಇಲ್ಲಿಯೂ ನನಗಾಗಿ ಹೋರಾಟ ಕಾದಿತ್ತು.

ರುಮಾಲು ತೆಗೆಯಲು ಕೆಲವು ಭಾರತೀಯರಿಗೆ ಏಕೆ ಒತ್ತಾಯಪಡಿಸುವರೆಂದು ಅಬ್ದುಲ್ಲಾಸೆಟ್ಟರು ನನಗೆ ವಿವರಿಸಿದರು:— "ಮುಸಲ್ಮಾನ ಉಡುಪಿನಲ್ಲಿದ್ದವರು ತಲೆಯ ಮೇಲೆ ರುಮಾಲು ಇಟ್ಟುಕೊಳ್ಳಬಹುದು. ಉಳಿದ ಹಿಂದೀಯರು ಮಾತ್ರ ತೆಗೆದಿಡಲೇಬೇಕು. ಇದು ಇಲ್ಲಿಯ ಕಟ್ಟಳೆ" ಎಂದು ಅವರು ಹೇಳಿದರು.

ರುಮಾಲು ಕಳಚಿಹಾಕುವುದು ಅಪಮಾನವನ್ನು ನುಂಗಿಕೊಳ್ಳುವುದರ ಸ್ಪಷ್ಟವಾದ ಕುರುಹು. ಆದ್ದರಿಂದ ಅದಕ್ಕೆ ಶರಣುಹೊಡೆದು ಇಂಗ್ಲಿಷ್ ಮಾದರಿಯ ಹ್ಯಾಟು ಹಾಕಿಕೊಳ್ಳುವುದು ಒಳಿತು ಎಂದು ಯೋಚಿಸಿದೆ. ಇದರಿಂದ ಅಪಮಾನವಾಗುವುದಿಲ್ಲ, ವಾಗ್ಯುದ್ಧ ಬೆಳೆಯುವುದಿಲ್ಲ.

ಆದರೆ ಇದಕ್ಕೆ ಅಬ್ದುಲ್ಲಾಸೆಟ್ಟರು ಸಮ್ಮತಿಸಲಿಲ್ಲ. "ನೀವು ಹೀಗೆಲ್ಲಾ ಮಾಡುವುದರಿಂದ ಆಗುವ ಪರಿಣಾಮ ಬಲು ಕೆಟ್ಟದು. ಭಾರತೀಯ ರುಮಾಲು ಸುತ್ತಿಕೊಳ್ಳುವವರನ್ನು ಇರುಕಿನಲ್ಲಿ ಸಿಕ್ಕಿಸಿದಂತಾಗುತ್ತದೆ. ಇದಲ್ಲದೆ ಅಂತಹ ರುಮಾಲು ನಿಮಗೆ ಚೆನ್ನಾಗಿ ಒಪ್ಪುತ್ತದೆ. ಹ್ಯಾಟು ಹಾಕಿಕೊಂಡಾಗ ನೀವು ವೇಟರ್ (ಇಂಗ್ಲಿಷ್ ಹೋಟೆಲಿನ ಪರಿಚಾರಕ)ನಂತೆ ಕಾಣುತ್ತೀರಿ" ಎಂದರವರು.

ಅವರ ಈ ಸಲಹೆಯಲ್ಲಿ ವ್ಯವಹಾರಜ್ಞಾನವಿತ್ತು; ಸ್ವಲ್ಪ ಮಟ್ಟಿಗೆ ಸಂಕುಚಿತ ಭಾವನೆಯೂ ಇತ್ತು.

ಒಟ್ಟಿನಲ್ಲಿ ಅವರ ಸೂಚನೆ ನನಗೆ ಸರಿದೋರಿತು. ಈ ಘಟನೆಯ ವಿಷಯದಲ್ಲಿ ಪತ್ರಿಕೆಗಳಿಗೆ ಬರೆದು ನನ್ನ ನಡತೆಯನ್ನು ಸಮರ್ಥಿಸಿಕೊಂಡೆ. ಪತ್ರಿಕೆಗಳು ಈ ವಿಚಾರದಲ್ಲಿ ಬಹಳವಾಗಿ ಚರ್ಚಿಸುತ್ತ ನನಗೆ 'ಅನಿಷ್ಟ

ಆಗಂತುಕ'ನೆಂದು ಹೆಸರಿಟ್ಟವು. ಹೀಗೆ ದಕ್ಷಿಣ ಆಫ್ರಿಕೆಯಲ್ಲಿ ಕಾಲಿಟ್ಟ ಸ್ವಲ್ಪ ದಿನಗಳಲ್ಲಿ ನನ್ನ ಹೆಸರು ನಾಲ್ಕೂ ಸಿಟ್ಟಿಗೆ ಹಬ್ಬಿತು. ಕೆಲವರು ನನಗ ಬೆಂಬಲಕೊಟ್ಟರು. ಕೆಲವರು ಈ ವಿಚಾರಗೇಡಿತನವನ್ನು ಚೆನ್ನಾಗಿ ಖಂಡಿಸಿದರು.

ನನಗೆ ಕೆಲಸ ಕೊಡಲು ಅಬ್ದುಲ್ಲಾ ಸೆಟ್ಟರು ಬಹಳ ಯೋಚಿಸಬೇಕಾಗಲಿಲ್ಲ. ಪ್ರಿಟೋರಿಯದಲ್ಲಿ ನಡೆಯುತಿದ್ದ ಅವರ ವ್ಯವಹರಣೆಗೆ ನನ್ನ ಅವಶ್ಯ-ಕತೆ ಬಿತ್ತು. ೭-೮ ದಿನಗಳಲ್ಲಿ ನಾನು ಡರ್ಬನ್ ಬಿಟ್ಟೆ. ನನಗಾಗಿ ಮೊದಲ ತರಗತಿಯ ತಿಕೆಟು ತೆಗೆದುಕೊಂಡಿದ್ದರು. ಐದು ಶಿಲಿಂಗು ಹೆಚ್ಚು ಕೊಟ್ಟರೆ ಉಗೆಬಂಡಿಯವರೇ ಹಾಸಿಗೆ ಒದಗಿಸುವುದು ಅಲ್ಲಿಯ ವಾಡಿಕೆ. ಒಂದು ಹಾಸಿಗೆ ಮೀಸಲು ಇರಿಸಬೇಕೆಂದು ಅಬ್ದುಲ್ಲಾ ಸೆಟ್ಟರು ಒತ್ತಾಯ ಪಡಿಸಿದರು. ಆದರೆ ಹಟವೂ ಹೆಮ್ಮೆಯೂ ಒಂದು ಕಡೆ; ಐದು ಶಿಲಿಂಗು ಉಳಿಸುವ ಹವ್ಯಾಸ ಇನ್ನೊಂದು ಕಡೆ. ಹೀಗಾಗಿ ಈ ಮಾತಿಗೆ ನಾನು ಒಡಂಬಡಲಿಲ್ಲ. ಅಬ್ದುಲ್ಲಾ ಸೆಟ್ಟರು ನನಗೆ ಸಾರಿ ಹೇಳಿದರು— 'ಇದು ನೋಡಿ, ಈ ದೇಶ ಹಿಂದುಸ್ಥಾನದಂತೆ ಅಲ್ಲ. ದೇವರ ದಯೆಯಿಂದ ನಮಗೆ ಬೇಕಾದಷ್ಟಿದೆ. ವೆಚ್ಚಕ್ಕೆ ನಾವು ಹಿಂದುಮುಂದು ನೋಡುವಂತಿಲ್ಲ. ಯಾವ ಕೊರತೆಯನ್ನೂ ನೀವು ಉಂಟುಮಾಡಿಕೊಳ್ಳಬಾರದು.'

ಅವರಿಗೆ ಕೃತಜ್ಞತೆಯನ್ನರ್ಪಿಸಿ ಯೋಚನೆ ಪಡಬಾರದೆಂದು ಧೈರ್ಯ ಹೇಳಿದೆ. ಉಗೆಬಂಡಿ ರಾತ್ರಿ ಒಂಬತ್ತು ಗಂಟೆಗೆ ಮಾರಿಟ್ಜ್‌ಬರ್ಗ್ ಸೇರಿತು. ಮಾರಿಟ್ಜ್‌ಬರ್ಗ್ ನೇತಾಳಿನ ರಾಜಧಾನಿ. ಪ್ರಯಾಣಿಕರಿಗೆ ಹಾಸಿಗೆ ಕೊಡುತಿದ್ದುದು ಇದೇ ನಿಲ್ದಾಣದಲ್ಲಿ. ರೇಲ್ವೆ ಊಳಿಗದವನೊಬ್ಬನು ಬಂದು 'ಹಾಸಿಗೆ ಬೇಕೇ?' ಎಂದು ನನ್ನನ್ನು ಕೇಳಿದ. 'ಬೇಡ, ನನ್ನಲ್ಲಿದೆ' ಎಂದೊಡನೆ ಅವನು ಹೊರಟುಹೋದ. ಅಷ್ಟರಲ್ಲಿ ಒಬ್ಬ ಪ್ರಯಾಣಿಕ ಅಲ್ಲಿಗೆ ಬಂದು ನನ್ನನ್ನು ಮೇಲಿನಿಂದ ಕೆಳಗಿನ ವರೆಗೆ ನೋಡಿದ. ನಾನು 'ಕಪ್ಪು ಬಣ್ಣದವ'ನೆಂದು ಅವನಿಗೆ ತಿಳಿಯಿತು. ಇದು ಅವನನ್ನು ರೇಗಿಸಿತು. ಅವನು ಹೊರಗೆ ಹೋಗಿ ಒಬ್ಬಿಬ್ಬ ಅಧಿಕಾರಿಗಳೊಡನೆ ಹಿಂದಿರುಗಿದ. ಇವರೆಲ್ಲರೂ ಸುಮ್ಮನಿದ್ದರು. ಇಷ್ಟರಲ್ಲಿ ನನ್ನ ಬಳಿಗೆ ಇನ್ನೊಬ್ಬ ಅಧಿಕಾರಿ ಬಂದು 'ನೀನು ಹಿಂದಿನ ಡಬ್ಬಿಗೆ ಹೋಗಬೇಕು' ಎಂದ.

"ನನ್ನಲ್ಲಿ ಒಂದನೇ ತರಗತಿಯ ತಿಕೆಟ್ ಇದೆಯಲ್ಲ" ಎಂದೆ ನಾನು.

"ಇದ್ದಿರಬಹುದು. ಕೊನೆಯ ಡಬ್ಬಿಗೆ ನೀನು ಹೋಗಲೇ ಬೇಕು." ಹೀಗೆ ಹೇಳಿದ್ದು ಮತ್ತೊಬ್ಬ ಅಧಿಕಾರಿ.

"ಹಾಗೆಂದರೇನು? ಡರ್ಬನ್ನಿನಲ್ಲಿ ನಾನು ಈ ಡಬ್ಬಿಯಲ್ಲಿ ಕುಳಿತಾಗ ಯಾರೂ ಅಡ್ಡಿ ಮಾಡಲಿಲ್ಲ. ಈಗ ನಾನು ಇಲ್ಲಿಯೇ ಕುಳ್ಳಿರತಕ್ಕವನು."

"ಸಾಧ್ಯವಿಲ್ಲ. ನೀನು ಕೆಳಗೆ ಇಳಿಯಲೇ ಬೇಕು. ಇಲ್ಲದಿದ್ದರೆ ಹೊರ ದೂಡಲು ಪೋಲೀಸರನ್ನು ಕರೆಯಬೇಕಾದೀತು." ಎಂದ ಆ ಅಧಿಕಾರಿ.

"ಅಗತ್ಯವಾಗಿ. ನಾನಾಗಿ ಈ ಸ್ಥಳ ಬಿಟ್ಟು ಕದಲುವುದಿಲ್ಲ."

ಪೋಲೀಸ್ ಬಂದ. ಆಮೇಲೆ ನನ್ನ ಕೈಹಿಡಿದೆಳೆದು ಹೊರದೂಡಿ ಬಿಟ್ಟ. ನನ್ನ ಸಾಮಾನು ಹೊರಗೆ ಇಳಿಸಲಾಯಿತು. ಬೇರೆ ಡಬ್ಬಿಗೆ ಹೋಗಲು ನಾನು ಒಪ್ಪಲಿಲ್ಲ. ಬಂಡಿ ಹೊರಟುಹೋಯಿತು. ನಾನು ಪ್ರಯಾಣಿಕರ ಕೋಣೆಗೆ ಹೋಗಿ ಕುಳಿತೆ. ನನ್ನ ಕೈಯ್ಯಲ್ಲಿದ್ದುದು ಒಂದು ಕೈಚೀಲ ಮಾತ್ರ. ಉಳಿದ ಎಲ್ಲ ಸಾಮಾನು ಬಿದ್ದಲ್ಲಿಯೇ ಇತ್ತು. ನಿಲ್ದಾಣದ ಅಧಿಕಾರಿಗಳು ಅದನ್ನು ಸ್ವಾಧೀನ ಪಡಿಸಿಕೊಂಡರು.

ಆಗ ಚಳಿಗಾಲ. ದಕ್ಷಿಣ ಆಫ್ರಿಕೆಯ ಎತ್ತರ ಪ್ರದೇಶದ ಚಳಿಗಾಲ ಅದ್ಭುತವಾದುದು. ಮಾರಿಟ್ಝ್‌ಬರ್ಗ್ ಬಹಳ ಎತ್ತರದಲ್ಲಿದ್ದುದರಿಂದ ಅಲ್ಲಿಯ ಚಳಿ ಕೊರೆಯುತ್ತಲಿತ್ತು. ನನ್ನ ನಿಲುವಂಗಿ ಅಧಿಕಾರಿಗಳ ಕೈಯಲ್ಲಿದ್ದ ಗಂಟಿನಲ್ಲಿತ್ತು. ಮತ್ತೊಮ್ಮೆ ಅಪಮಾನಕ್ಕೆ ಗುರಿಯಾಗಬಹುದೆಂಬ ಹೆದರಿಕೆಯಿಂದ ಅದನ್ನು ಕೇಳುವ ಗೊಡವೆಗೆ ಹೋಗಲಿಲ್ಲ. ಚಳಿಗೆ ನಡುಗುತ್ತ ಹಾಗೆಯೆ ಕುಳಿತೆ. ಕೋಣೆಯಲ್ಲಿ ದೀಪವಿರಲಿಲ್ಲ. ನಟ್ಟಿರುಳಿನ ಸುಮಾರಿಗೆ ಯಾವನೋ ಒಬ್ಬ ಪ್ರಯಾಣಿಕ ಒಳಗೆ ಬಂದ. ಅವನಿಗೆ ನನ್ನೊಡನೆ ಮಾತನಾಡುವ ಇಚ್ಛೆ ಇದ್ದಿರಬಹುದು. ಆದರೆ ನನ್ನ ಮನಸ್ಸು ಮಾತನಾಡುವ ಸ್ಥಿತಿಯಲ್ಲಿರಲಿಲ್ಲ.

ನಾನು ಮುಂದಿನ ಕರ್ತವ್ಯವೇನೆಂಬುದನ್ನು ಯೋಚಿಸತೊಡಗಿದೆ. ನನ್ನ ಹಕ್ಕುಗಳಿಗಾಗಿ ಹೋರಾಡಬೇಕೆ, ಹಿಂದುಸ್ಥಾನಕ್ಕೆ ಹಿಂದಿರುಗಬೇಕೆ? ಅಥವಾ ಅಪಮಾನವನ್ನು ಲಕ್ಷಿಸದೆ ಪ್ರಿಟೋರಿಯಕ್ಕೆ ಹೋಗಿ ಈ ವ್ಯವಹರಣೆ ಕೊನೆಗಂಡ ಬಳಿಕ ಹಿಂದುಸ್ಥಾನಕ್ಕೆ ಹಿಂದಿರುಗಬೇಕೆ? ಒಪ್ಪಿಕೊಂಡ ಕೆಲಸ

ಪೂರೈಸದೆ ಹಿಂದುಸ್ಥಾನಕ್ಕೆ ಓಡಿಹೋಗುವುದು ಪುಕ್ಕತನವೇ ಸರಿ. ನಾನು ಅನುಭವಿಸಿದ ಪಡಿಪಾಟಲು ಯಾವುದೋ ಒಂದು ಬೇನೆಯ ಹೊರಲಕ್ಷಣ- ಆಳವಾಗಿ ಹರಡಿರುವ ವರ್ಣದ್ವೇಷದ ದೀರ್ಘವ್ಯಾಧಿಯ ಕುರುಹು ಮಾತ್ರ. ಸಾಧ್ಯವಿದ್ದರೆ ಇದನ್ನು ಬೇರಿನೊಂದಿಗೆ ಕಿತ್ತೊಗೆಯಲು ಯತ್ನಿಸಬೇಕು. ಈ ಪ್ರಯತ್ನದಲ್ಲಿ ಬರಬಹುದಾದ ಕಷ್ಟನಷ್ಟಗಳನ್ನು ಎದುರಿಸಬೇಕು. ಇದರಲ್ಲಿ ನನಗೆ ಒದಗಬಹುದಾದ ತೊಂದರೆಗಳಿಗೆ ಅವಶ್ಯವಿದ್ದಷ್ಟು ಪರಿ ಹಾರ ಮಾತ್ರ ಪಡೆಯಬೇಕು.

ಹೀಗೆ ಯೋಚಿಸಿ ಮುಂದಿನ ಮೊಟ್ಟಮೊದಲನೆ ಬಂಡಿಯಿಂದ ಪ್ರಿಟೋರಿಯಕ್ಕೆ ಹೋಗುವುದನ್ನು ಗೊತ್ತುಮಾಡಿದೆ.

ಮರುದಿನ ಬೆಳಿಗ್ಗೆ ರೈಲ್ವೆ ಜನರಲ್ ಮೆನೇಜರರಿಗೆ ವಿವರವಾದ ಒಂದು ತಂತಿ ಕಳಿಸಿದೆ. ಅಬ್ದುಲ್ಲಾ ಸೆಟ್ಟರಿಗೂ ಈ ವಿಷಯ ತಿಳಿಸಿದ್ದಾಯಿತು. ಅವರು ಕೂಡಲೇ ಜನರಲ್ ಮೆನೇಜರರನ್ನು ಕಂಡರು. ರೈಲ್ವೆ ಸೇವಕರ ನಡತೆಯನ್ನು ಈ ಅಧಿಕಾರಿ ಸಮರ್ಥಿಸಿದ. ಆದರೆ, ನನಗಾಗಿ ತಕ್ಕ ಏರ್ಪಾಡು ಮಾಡುವಂತೆ ನಿಲ್ಮನೆಯ ಅಧಿಕಾರಿಗೆ ತಿಳಿಸಿರುವುದಾಗಿ ಅವನು ಅಬ್ದುಲ್ಲಾ ಸೆಟ್ಟರಿಗೆ ಹೇಳಿದ. ನನ್ನನ್ನು ಸರಿಯಾಗಿ ನೋಡಿಕೊಳ್ಳುವಂತೆ ಅಬ್ದುಲ್ಲಾ ಸೆಟ್ಟರೂ ಮಾರಿಟ್ಸ್‌ಬರ್ಗಿನ ಹಿಂದೀ ವ್ಯಾಪಾರಿಗಳಿಗೆ ಮತ್ತು ಉಳಿದ ಕಡೆಯ ಸ್ನೇಹಿತರಿಗೆ ತಂತಿಯಿಂದ ತಿಳಿಸಿದ್ದರು. ವ್ಯಾಪಾರಿಗಳು ನನ್ನನ್ನು ಕಾಣಲು ನಿಲ್ಮನೆಗೆ ಬಂದರು. ಆಗ ಅವರು ತಮ್ಮ ಎಲ್ಲ ಸಂಕಷ್ಟಗಳನ್ನು ಹೇಳಿದರು. ಮತ್ತು ಈ ಘಟನೆ ಸೋಜಿಗದ ಸಂಗತಿಯಲ್ಲವೆಂದು ನನ್ನನ್ನು ಸಂತೈಸಲು ಯತ್ನಿಸಿದರು. ರೈಲ್ವೆ ಅಧಿಕಾರಿಗಳಿಂದ ಮತ್ತು ಬಿಳಿಯ ಪ್ರಯಾಣಿಕರಿಂದ ತೊಂದರೆಯಾಗುವುದೆಂಬುದನ್ನು ಒಂದನೆ ಎರಡನೆ ತರಗತಿಯಲ್ಲಿ ತಿರುಗಾಡುವ ಹಿಂದೀ ಪ್ರಯಾಣಿಕರು ಖಂಡಿತ ತಿಳಿಯಬೇಕೆಂದು ಅವರು ಹೇಳಿದರು. ಅಂತೂ ಆ ದಿನವೆಲ್ಲ ಕಷ್ಟದ ಇಂತಹ ಹಲವು ಕತೆಗಳಲ್ಲಿ ಕಳೆದುಹೋಯಿತು. ಸಂಜೆಯ ಬಂಡಿಯಲ್ಲಿ ನನಗಾಗಿ ಮೀಸಲು (Reserved) ಸ್ಥಳವೊಂದು ಏರ್ಪಟ್ಟಿತ್ತು. ಡರ್ಬನ್ನಿನಲ್ಲಿ ಬೇಡವೆಂದು ಬಿಟ್ಟಿದ್ದ ಹಾಸಿಗೆಯ ತಿಕೆಟು ಇಲ್ಲಿ ಕೊಂಡುಕೊಂಡೆ.

ರೈಲುಬಂಡಿ ನನ್ನನ್ನು ಚಾರ್ಲ್ಸ್‌ಟೌನಿಗೆ ಕರೆದೊಯ್ದಿತು. ಮುಂದೆ

ಬಂಡಿಯಿಂದ ಜೋಹಾನ್ಸ್‌ಬರ್ಗಿಗೂ ಅಲ್ಲಿಂದ ಮುಂದೆ ಉಗಿಬಂಡಿಯಿಂದ ಪ್ರಿಟೋರಿಯಕ್ಕೂ ಹೋದೆ. ಆದರೆ ದಾರಿಯಲ್ಲಿ ತೊಂದರೆಗಳೇನೂ ತಪ್ಪಲಿಲ್ಲ.

## ೧೫. ಸಮಾಜಸೇವೆ

ಹೀಗೆ ನನಗೆ ೧೮೯೩ರಲ್ಲಿ, ದಕ್ಷಿಣ ಆಫ್ರಿಕೆಯಲ್ಲಿದ್ದ ಭಾರತೀಯರ ಸ್ಥಿತಿಗತಿಯ ಅರಿವು ಚೆನ್ನಾಗಿ ಆಯಿತು. ಆದರೆ ಈ ವಿಷಯದಲ್ಲಿ ನಾನು ಮಾಡಿದ ಕೆಲಸ ಪ್ರಿಟೋರಿಯದ ಹಿಂದೀಯರೊಡನೆ ಆಗೊಮ್ಮೆ ಈಗೊಮ್ಮೆ ಮಾತನಾಡಿದ್ದು ಮಾತ್ರ. ಹೆಚ್ಚಿಗೆ ಏನೂ ಮಾಡುವುದಾಗಲಿಲ್ಲ. ಇತ್ತ ಅಂಗಡಿಯ ವ್ಯವಹರಣೆ; ಅತ್ತ ಭಾರತೀಯರ ಸಂಕಷ್ಟ. ಇವೆರಡೂ ಒಮ್ಮೆಲೇ ಕೈಕೊಳ್ಳುವುದು ಸಾಧ್ಯವೆಂದು ತೋರಲಿಲ್ಲ. ಎರಡೂ ಕೆಲಸ ಏಕಕಾಲದಲ್ಲಿ ಮಾಡಲು ಹವಣಿಸುವುದರಿಂದ ಎರಡಕ್ಕೂ ಕೇಡು. ಅಂತೂ ೧೮೯೪ ಬಂದುಬಿಟ್ಟಿತು. ನನ್ನನ್ನು ದಕ್ಷಿಣ ಆಫ್ರಿಕೆಗೆ ಕರೆತಂದ ವ್ಯವಹಾರ ತೃಪ್ತಿಕರವಾಗಿ ಕೊನೆಗಂಡಿತ್ತು. ಆದ್ದರಿಂದ ನಾನು ಡರ್ಬನ್ನಿಗೆ ಬಂದೆ. ಹಾಗೂ ಹಿಂದುಸ್ಥಾನಕ್ಕೆ ಹೊರಡುವ ಸಿದ್ಧತೆಯಲ್ಲಿ ತೊಡಗಿದೆ. ದಾದಾ ಅಬ್ದುಲ್ಲಾ ಸೆಟ್ಟರು ನನಗಾಗಿ ಏರ್ಪಡಿಸಿದ ಬೀಳ್ಕೊಳ್ಳುವ ಸಮಾರಂಭದಲ್ಲಿ ಯಾರೋ ಒಬ್ಬರು 'ನೇಟಾಲ್ ಮರ್ಕ್ಯುರಿ' ಪತ್ರಿಕೆ ನನ್ನ ಕೈಯ್ಯಲ್ಲಿತ್ತರು. ಅದನ್ನು ಓದುತ್ತಿರುವಾಗ, ಆಗ ನಡೆಯುತ್ತಲಿದ್ದ ನೇಟಾಲ್ ಶಾಸನ ಮಂಡಲದ (Legislative Assembly) ಕಾರ್ಯಕಲಾಪಗಳ ವರದಿ ನನ್ನ ದೃಷ್ಟಿಗೆ ಬಿತ್ತು. ಆ ವರದಿಯ ಒಂದು ಮೂಲೆಯಲ್ಲಿ 'ಹಿಂದೀಯರ ಮತಾಧಿಕಾರ' ಎಂಬ ತಲೆಬರಹದಲ್ಲಿ ಕೆಲವು ಸಾಲುಗಳಿದ್ದುವು. ಹಿಂದೀಯರಿಗಿದ್ದ ಮತಾಧಿಕಾರವನ್ನು ಕಸಿದುಕೊಳ್ಳುವ ಒಂದು ಕಟ್ಟಳೆಯನ್ನು ನೇಟಾಲ್ ಸರಕಾರ ಮಾಡುವ ಹಂಚಿಕೆಯಲ್ಲಿದ್ದಿತು. ಅಲ್ಲಿಯ ಹಿಂದೀಯರಿಗಿದ್ದ ರಾಜಕೀಯ ಹಕ್ಕೆಂದರೆ ಈ ಮತಾಧಿಕಾರ ಮಾತ್ರ. ಇದನ್ನೂ ಕಣ್ಮರೆ ಮಾಡುವುದೇ ಈ ಹೊಸ ಕಟ್ಟಳೆಯ ಹೊಂಚು. ಆದ್ದರಿಂದ ಹಿಂದುಸ್ಥಾನದ ನನ್ನ ಪ್ರಯಾಣ ಮುಂದೆಹಾಕಬೇಕಾಯಿತು. ಅದೇ ರಾತ್ರಿ ಶಾಸನ ಮಂಡಲಕ್ಕೆ ಒಪ್ಪಿಸುವುದಕ್ಕೆಂದು ಒಂದು ಮನವಿ ಬರೆದೆ. ಮರುದಿನ, ಸಭೆಯು ಕಾರ್ಯ

ಕಲಾಪಗಳನ್ನು ಸ್ವಲ್ಪ ಕಾಲ ತಡೆಯಬೇಕೆಂದು ಸರಕಾರಕ್ಕೆ ತಂತಿ ಕಳಿಸಿದೆವು. ಹಾಗೂ ಅಬ್ದುಲ್ಲಾ ಸೆಟ್ಟರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನೂ ಏರ್ಪಡಿಸಿದೆವು. ಸರಕಾರಕ್ಕೆ ತಂತಿ ಕಳುಹಿಸಿದ್ದು ಅವರ ಹೆಸರಿನಿಂದಲೇ. ಸರಕಾರ ಈ ತಂತಿಯ ಪರಿಣಾಮವಾಗಿ ಕಟ್ಟಳೆಯ ಎರಡನೆಯ ಚರ್ಚೆಯನ್ನು ಎರಡು ದಿನ ಮುಂದೆಹಾಕಿತು. ದಕ್ಷಿಣ ಆಫ್ರಿಕೆಯ ಹಿಂದೀಯರು ಅಲ್ಲಿಯ ಶಾಸನ ಮಂಡಲಕ್ಕೆ ಮನವಿ ಕಳುಹಿಸಿದ್ದು ಇದೇ ಮೊದಲು. ಈ ಮನವಿಯಿಂದ ಕಟ್ಟಳೆಯನ್ನು ತಡೆಯುವುದು ಸಾಧ್ಯವಾಗದಿದ್ದರೂ ಹಿಂದೀಯರಲ್ಲಿ ಒಂದು ಹೊಸ ಚೈತನ್ಯ ಉಂಟಾದುದು ಖಂಡಿತ. ದಕ್ಷಿಣ ಆಫ್ರಿಕೆಯ ಹಿಂದೀಯರಿಗೆ ಇಂತಹ ಚಳುವಳಿಯ ಅನುಭವ ಹೊಸದು. ಈ ಚಟುವಟಿಕೆಯಿಂದ ಅಲ್ಲಿಯ ಹಿಂದೀ ಸಂಗಡದಲ್ಲಿ ಹೊಸ ಉತ್ಸಾಹ ತುಂಬಿತು. ಸಭೆಗಳು ಪ್ರತಿ ದಿನ ನೆರೆಯುತ್ತಿದ್ದವು. ಜನರೂ ದಿನದಿಂದ ದಿನಕ್ಕೆ ಹೆಚ್ಚಾಗಿ ಸೇರುತ್ತಿದ್ದರು. ಅವಶ್ಯವಿದ್ದುದಕ್ಕಿಂತ ಹೆಚ್ಚು ನಿಧಿ ಒಟ್ಟುಗೂಡಿತು. ಪ್ರತಿ ತೆಗಯಲು, ಒಪ್ಪಿತಗಳನ್ನು (Signatures) ಪಡೆಯಲು, ಮತ್ತು ಇಂತಹ ಹಲವು ಕೆಲಸ ಮಾಡಲು ಎಷ್ಟೋ ಸ್ವಯಂಸೇವಕರು ನೆರವಾದರು. ಯಾವ ಪ್ರತಿಫಲವನ್ನೂ ಅವರು ಬಯಸಲಿಲ್ಲ. ಕೆಲಸದ ಜೊತೆಗೆ ಹಣದ ನೆರವೂ ಕೆಲವರಿಂದ ಬಂತು. ಕರಾರುಕೂಲಿಗಳ ಪೀಳಿಗೆಯವರು ಈ ಚಳುವಳಿಯಲ್ಲಿ ಚಟುವಟಿಕೆಯಿಂದ ಸೇರಿದರು. ಇವರು ಇಂಗ್ಲಿಷ್ ಬಲ್ಲವರು. ಇವರ ಬರವಣಿಗೆ ಬಹಳ ಮುದ್ದಾದುದು. ಪ್ರತಿ ತೆಗೆಯುವುದನ್ನೂ ಉಳಿದ ಕೆಲಸಗಳನ್ನೂ ಇವರು ಗುಣುಗುಟ್ಟದೆ, ಒಮ್ಮನಸ್ಸಿನಿಂದ, ಹಗಲಿರುಳೂ ಮಾಡಿದರು. ವಸಾಹತು ಮಂತ್ರಿ ಲಾರ್ಡ್ ರಿಪನ್ನರಿಗೆ ೧೦ ಸಾವಿರ ಜನರ ಒಪ್ಪಿತವುಳ್ಳ ಒಂದು ಮನವಿಯನ್ನು ಒಂದು ತಿಂಗಳಿನಲ್ಲಿ ಕಳಿಸಲಾಯಿತು. ಹೀಗೆ, ಕೂಡಲೇ ನೆರವೇರಬೇಕೆಂದು ನಾನು ಗೊತ್ತುಮಾಡಿಕೊಂಡಿದ್ದ ಕೆಲಸ ಕೊನೆಗಂಡಿತು.

ಆದ್ದರಿಂದ ತಾಯಿನಾಡಿಗೆ ಹೊರಡಲು ಸಂಗಡಿಗರ ಅಪ್ಪಣೆ ಕೇಳಿದೆ. ಆದರೆ ಅಲ್ಲಿ ನಡೆದ ಚಟುವಟಿಕೆ ಅಲ್ಲಿಯ ಭಾರತೀಯರ ಲಕ್ಷ್ಯವನ್ನು ಅತಿಯಾಗಿ ಸೆಳೆದಿದ್ದಿತು. ಆದ್ದರಿಂದ ನನ್ನನ್ನು ಕಳಿಸಲು ಅವರು ಸಿದ್ಧರಿರಲಿಲ್ಲ. ಅವರು ‘ ಈ ಕಟ್ಟಳೆ ನಮ್ಮ ಸರ್ವನಾಶದ ಮೊದಲ ಮೆಟ್ಟಲೆಂದು ನೀವೇ

ಹೇಳಿದಿರಿ. ವಸಾಹತು ಮಂತ್ರಿ ನಮ್ಮ ಮನವಿಗೆ ಅನುಕೂಲ ಉತ್ತರ ಕೊಡುವನೋ ಇಲ್ಲವೋ ಯಾರು ಬಲ್ಲರು? ನಮ್ಮ ಉತ್ಸಾಹ ನೀವು ಕಂಡಿದ್ದೀರಿ. ಇದಕ್ಕಾಗಿ ದುಡಿಯಲಿಕ್ಕೂ ಹಣ ಕೊಡಲಿಕ್ಕೂ ನಾವು ಸಿದ್ಧರು. ಆದರೆ ದಾರಿ ತೋರಿಸುವವರಿಲ್ಲದಿದ್ದರೆ ಮಾಡಿದ್ದೆಲ್ಲವೂ ಮಣ್ಣು ಮುಕ್ಕುವುದು. ಆದ್ದರಿಂದ ಇಲ್ಲಿ ನಿಲ್ಲುವುದು ನಿಮ್ಮ ಕರ್ತವ್ಯವೆಂದು ನಮ್ಮ ಭಾವನೆ' ಎಂದರು. ಅವರ ಹೇಳಿಕೆಯೊಳಗಿನ ತಥ್ಯಾಂಶ ನನ್ನ ಮನಸ್ಸನ್ನು ತಟ್ಟಿತು. ಆದ್ದರಿಂದ ಹಿಂದೀಯರ ಹಿತಸಂರಕ್ಷಣೆಗಾಗಿ ಶಾಶ್ವತವಾದ ಒಂದು ಸಂಸ್ಥೆ ಏರ್ಪಡುವುದು ಅಗತ್ಯವೆಂದು ತೋರಿತು. ಹೀಗೆ ಹಿಂದೂ ಸ್ಥಾನಕ್ಕೆ ಹೊರಡುವುದನ್ನು ನಾನು ಮತ್ತೊಮ್ಮೆ ನಿಲ್ಲಿಸಬೇಕಾಯಿತು. ಇದರ ಫಲವೇ ಅಲ್ಲಿ ಸ್ಥಾಪಿತವಾದ ನೇಟಾಲ್ ಇಂಡಿಯನ್ ಕಾಂಗ್ರೆಸ್ಸು. ಹೀಗೆ, ದೇವರು ದಕ್ಷಿಣ ಆಫ್ರಿಕೆಯೊಳಗಿನ ನನ್ನ ಜೀವನದ ಅಡಿಗಲ್ಲನ್ನು ಹಾಕಿದಂತಾಯಿತು. ಆ ಮೂಲಕ, ಆತ್ಮಗೌರವಕ್ಕಾಗಿ ಭಾರತೀಯರು ಹೂಡಬೇಕಾದ ಹೋರಾಟದ ಬೀಜ ಬಿತ್ತಿದಂತಾಯಿತು. ಅಲ್ಲಿ ಕಾಂಗ್ರೆಸ್ ಸ್ಥಾಪಿತವಾದುದು ಸುಮಾರು ೧೮೯೪ರ ಮೇ ತಿಂಗಳಿನಲ್ಲಿ.

ಕಾಂಗ್ರೆಸ್ಸು ಯಾವ ಯಾವ ವಿಪತ್ತು ಎದುರಿಸಬೇಕಾಯಿತು, ಈ ಸಂಸ್ಥೆಯನ್ನು ಹೇಳ ಹೆಸರಿಲ್ಲದಂತೆ ಮಾಡಲು ಅಧಿಕಾರಿಗಳು ಕೊಟ್ಟ ಆಘಾತಗಳೇನು, ಹೀಗಿದ್ದರೂ ಅದು ನಷ್ಟಕ್ಕೆ ಒಳಗಾಗದೆ ಹೇಗೆ ಬದುಕಿತು, ಮುಂತಾದುದನ್ನು ನಾನು ಇಲ್ಲಿ ಬಿಟ್ಟುಬಿಡಬೇಕಾಗಿದೆ. ಇದೆಲ್ಲ ಕಾಂಗ್ರೆಸ್ಸಿನ ಮುಂದಿನ ಇತಿಹಾಸಕ್ಕೆ ಸಂಬಂಧಿಸಿದ್ದು. ಆದರೆ ಒಂದು ಸಂಗತಿ ಮಾತ್ರ ನಾನು ಮರೆಯಲಾರೆ. ಅಲ್ಲಿಯ ಹಿಂದೀ ಪಂಗಡ ಅತಿಶಯೋಕ್ತಿಯ ಜನ್ನು ಹತ್ತದಂತೆ ನೋಡಿಕೊಳ್ಳಲಾಯಿತು. ತಮ್ಮ ಕೊರತೆಗಳನ್ನು ತಿಳಿದುಕೊಳ್ಳುವಂತೆ ಮಾಡಲು ಯಾವಾಗಲೂ ಯತ್ನಿಸಲಾಯಿತು. ಐರೋಪ್ಯರ ಯಾವ ಅಭಿಪ್ರಾಯವನ್ನೂ ಯೋಗ್ಯವಾಗಿ ಯೋಚನೆ ಮಾಡದೆ ಬಿಡುತ್ತಿರಲಿಲ್ಲ. ಸರಿಸಮಾನತೆಯಿಂದಲೂ ಆತ್ಮಗೌರವಕ್ಕೆ ಕುಂದು ಬಾರದ ರೀತಿಯಲ್ಲಿಯೂ ಅವರೊಡನೆ ಸಹಕರಿಸಲು ಒದಗಿದ ಯಾವ ಸಂದರ್ಭವನ್ನೂ ಕಳೆದುಕೊಳ್ಳುತ್ತಿರಲಿಲ್ಲ. ಹಿಂದೀಯರ ಚಟುವಟಿಕೆಗಳ ವಿಷಯದಲ್ಲಿ ಅಲ್ಲಿಯ ಪತ್ರಿಕೆಗಳು ಪ್ರಕಟಿಸುವಷ್ಟು ಸುದ್ದಿ ಅವರಿಗೆ ಒದಗಿಸಲಾಗುತಿದ್ದಿತು. ಅಲ್ಲದ ಸಲ್ಲದ ಸುದ್ದಿ ಪ್ರಕಟವಾದರೆ ಅದೇ ಪತ್ರಿಕೆಯಲ್ಲಿ ತಕ್ಕ ಉತ್ತರವೂ ಬರುತಿದ್ದಿತು.

# ೧೬. ಬಿರುಗಾಳಿಯ ಅಬ್ಬರ

ನಾನು ದಕ್ಷಿಣ ಆಫ್ರಿಕೆಗೆ ಬಂದು ಮೂರು ವರುಷವಾಗಿತ್ತು. ಅಷ್ಟರಲ್ಲಿ ನನಗೆ ಜನರ ಪರಿಚಯ, ಜನರಿಗೆ ನನ್ನ ಪರಿಚಯ ಆಗಿದ್ದಿತು. ನನ್ನ ವಕೀಲತನದ ಕೆಲಸ ಚೆನ್ನಾಗಿ ನಡೆದಿತ್ತು. ಜನರಿಗೂ ನನ್ನ ಇರುವಿಕೆಯ ಅವಶ್ಯಕತೆ ಎನಿಸಿತ್ತು. ಆದ್ದರಿಂದ ತಾಯ್ನಾಡಿನಿಂದ ಹೆಂಡತಿ ಮಕ್ಕಳನ್ನು ಕರೆತಂದು ಅಲ್ಲಿಯೆ ನೆಲಸಬೇಕೆಂದು ಗೊತ್ತುಮಾಡಿದೆ. ಹೀಗೆ, ಅಲ್ಲಿಯ ಭಾರತೀಯರ ಒಪ್ಪಿಗೆ ಪಡೆದು ೧೮೯೬ರಲ್ಲಿ ೬ ತಿಂಗಳು ಮಟ್ಟಿಗೆ ಹಿಂದುಸ್ಥಾನಕ್ಕೆ ಹಿಂದಿರುಗಿದೆ. ಈ ಅವಧಿ ಮುಗಿಯುವಷ್ಟರಲ್ಲಿ ಕೂಡಲೇ ಹೊರಟುಬರಬೇಕೆಂದು ನೇಟಾಲಿನಿಂದ ನನಗೆ ತಂತಿ ಬಂದಿತು. ಆದುದರಿಂದ ನಾನು ಕೂಡಲೇ ಹೊರಟುಬಿಟ್ಟೆ. ದಾದಾ ಅಬ್ದುಲ್ಲರವರು ಕೋರ್ಲ್ಯಾಂಡ್ ಎಂಬ ಒಂದು ಉಗೆಹಡಗನ್ನು ಆಗ ಮಾತ್ರ ಕೊಂಡುಕೊಂಡಿದ್ದರು. ನನ್ನನ್ನೂ ಹೆಂಡತಿ ಮಕ್ಕಳನ್ನೂ ಪುಕ್ಕಟೆ ಕರೆದೊಯ್ಯಲಾಗುವುದೆಂದೂ ಆದ್ದರಿಂದ ನಾವು ಆ ಹಡಗಿನಲ್ಲಿ ಪಯಣ ಬೆಳೆಸಬೇಕೆಂದೂ ನನಗೆ ಒತ್ತಾಯ ಪಡಿಸಿದರು. ಈ ಆಮಂತ್ರಣವನ್ನು ನಾನು ಕೃತಜ್ಞತೆಯಿಂದ ಸ್ವೀಕರಿಸಿದೆ. ಅಂತೂ ಈ ಹಡಗಿನ ಮೂಲಕ ಮುಂಬಯಿಯಿಂದ ನೇಟಾಲಿಗೆ ನಾವು ಡಿಸೆಂಬರ್ ಆರಂಭದಲ್ಲಿ ಹೊರಟೆವು. ನನ್ನೊಂದಿಗಿದ್ದವರು ನನ್ನ ಹೆಂಡತಿ, ಇಬ್ಬರು ಮಕ್ಕಳು. ಮುಂಬಯಿಯಿಂದ ನಾದೇರಿ ಎಂಬ ಇನ್ನೊಂದು ಉಗೆ ಹಡಗೂ ಡರ್ಬನ್ನಿಗೆ ಹೊರಟಿತು. ಈ ಎರಡು ಹಡಗಿನಲ್ಲಿಯೂ ಇದ್ದ ಪ್ರಯಾಣಿಕರ ಸಂಖ್ಯೆ ಸುಮಾರು ೮೦೦. ಇವರಲ್ಲಿ ಅರ್ಧದಷ್ಟು ಜನ ಟ್ರಾನ್ಸ್‌ವಾಲಿಗೆ ಹೋಗುವವರು.

ನಮ್ಮ ಹಡಗು ನಡುವೆ ಎಲ್ಲಿಯೂ ನಿಲ್ಲದೆ ನೇರವಾಗಿ ನೇಟಾಲಿಗೆ ಹೊರಟಿತ್ತು. ಆದ್ದರಿಂದ ನಮ್ಮ ಪಯಣ ೧೮ ದಿನಗಳಲ್ಲಿ ಕೊನೆಗೊಳ್ಳುವುದಿದ್ದಿತು. ಆದರೆ ನಡುವೆ, ದಡ ಸೇರಿದ ಮೇಲೆ ಬರಲಿದ್ದ ನಿಜವಾದ ಚಂಡಮಾರುತದ ಸೂಚನೆಯೋ ಎಂಬಂತೆ ಬಲವಾದ ಬಿರುಗಾಳಿ ಎದ್ದಿತು. ಆಗ ನಾವು ನೇಟಾಲ್ ಸೇರಲು ಇನ್ನೂ ನಾಲ್ಕು ದಿನದ ಹಾದಿ. ದಕ್ಷಿಣ ಗೋಲಾರ್ಧದಲ್ಲಿ ಡಿಸೆಂಬರ್ ತಿಂಗಳು ಬೇಸಿಗೆಯ ಕಾಲ. ಆಗ ಸಮುದ್ರದಲ್ಲಿ ಏಳುವ ಚಿಕ್ಕ ದೊಡ್ಡ ಬಿರುಗಾಳಿಗಳಿಗೆ ಲೆಕ್ಕವಿಲ್ಲ. ಅಂದು ನಮ್ಮನ್ನು ಸುತ್ತು

ಗಟ್ಟಿದ ಬಿರುಗಾಳಿ ಅತಿ ಪ್ರಚಂಡವಾದದ್ದು, ಅತಿ ವಿಸ್ತಾರವಾದದ್ದು. ಈ ಗಾಳಿಯ ಅಬ್ಬರಕ್ಕೆ ಪಯಣಿಗರು ದಿಗಿಲುಗೊಂಡುಬಿಟ್ಟರು. ಅದೊಂದು ಗಂಭೀರ ದೃಶ್ಯ. ಪ್ರತ್ಯಕ್ಷ ಅಪಾಯವೇ ರೂಪಗೊಂಡು ಬಂದಿದ್ದರಿಂದ ಎಲ್ಲರೂ ಒಂದಾದರು. ತಮ್ಮೊಳಗಿನ ಎಲ್ಲ ಭೇದವನ್ನು ಮರೆತು ಒಬ್ಬನೆ ಒಬ್ಬನಾದ ಆ ದೇವರನ್ನು ನೆನೆಯತೊಡಗಿದರು—ಮುಸಲ್ಮಾನರು, ಹಿಂದುಗಳು, ಕಿರಿಸ್ತಾನರು, ಎಲ್ಲರೂ. ಹಲವರು ಎಷ್ಟೋ ಹರಕೆ ಹೊತ್ತರು. ಪ್ರಯಾಣಿಕರ ಪ್ರಾರ್ಥನೆಯಲ್ಲಿ ಹಡಗಿನ ಮುಖ್ಯಸ್ಥನೂ ಬಂದು ಸೇರಿದ. ಅವನು ಜನರಿಗೆ 'ಇದು ದೊಡ್ಡ ಬಿರುಗಾಳಿ ಎಂಬುದು ನಿಜ. ಆದರೆ ಇದಕ್ಕೂ ಹೆಚ್ಚಿನದನ್ನು ನಾನು ನೋಡಿದ್ದೇನೆ. ಹಡಗು ಗಟ್ಟಿಮುಟ್ಟಾಗಿದ್ದ ಮೇಲೆ ಹೆದರಿಕೆ ಏತರದು?' ಎಂದು ಧೈರ್ಯ ಹೇಳತೊಡಗಿದ. ಇದು ಸಮಾಧಾನಕ್ಕಾಗಿ ಹೇಳಿದ ಮಾತು ಮಾತ್ರ. ಸಪ್ಪಳ, ಅಪ್ಪಳಿಕೆ ಮುಂತಾದುವು ನಿಮಿಷ ನಿಮಿಷಕ್ಕೂ ಕೇಳಬರುತಿದ್ದುವು. ಆದ್ದರಿಂದ ಹಡಗು ಬಿರಿಯುವ ಸಂದರ್ಭವೂ ಇತ್ತು; ತೂತು ಬೀಳುವ ಸಂದರ್ಭವೂ ಇತ್ತು. ಹಡಗು ಇಷ್ಟರಲ್ಲಿ ಬುಡಮೇಲಾಗಬಹುದೆಂಬದಕ್ಕೆ ಅದರ ಅಲ್ಲಾಟ ಹೊಯ್ದಾಟಗಳು ಸಾಕ್ಷಿಯಾಗಿದ್ದುವು. ಇಂತಹ ಹೊತ್ತಿನಲ್ಲಿ ಹಡಗಿನ ಮೇಲ್ಭಾಗದಲ್ಲಿರುವುದು ಯಾರಿಗೂ ಸಾಧ್ಯವಿಲ್ಲ. ಪ್ರತಿ ಒಬ್ಬರೂ 'ದೇವರ ಇಚ್ಛೆಯಂತೆ ಆಗಲಿ' ಎನ್ನುವವರೇ. ಈ ಸ್ಥಿತಿ ಸುಮಾರು ೨೪ ಗಂಟೆ ಇದ್ದಿರಬಹುದು. ಕೊನೆಗೆ ಮೋಡಗಳೆಲ್ಲ ಕರಗಿಹೋಗಿ ಸೂರ್ಯದರ್ಶನವಾಯಿತು. ಬಿರುಗಾಳಿಯ ಅಬ್ಬರ ತಗ್ಗಿತೆಂದು ಹಡಗಿನ ಅಧಿಕಾರಿ ಹೇಳಿದ. ಜನರ ಮೋರೆಯ ಮೇಲೆ ಸಂತೋಷ ಸುಳಿಯತೊಡಗಿತು. ಕುತ್ತು ಕಳೆದೊಡನೆ ದೇವರ ಹೆಸರು ಜನರ ನಾಲಿಗೆಯಿಂದ ಮಾಯವಾಯಿತು. ಎಂದಿನಂತೆ ಗಾನ ವಿನೋದ, ಕುಡಿತ ಕುಣಿತಗಳು ಆರಂಭವಾದುವು. ಸಾವಿನ ಹೆದರಿಕೆ ಹೋಯಿತು; ಆ ಅನನ್ಯ ಪ್ರಾರ್ಥನೆಯ ಕ್ಷಣಿಕ ಚಿತ್ತವೃತ್ತಿ ಕಣ್ಮರೆಯಾಗಿ ಮಾಯೆ ತಿರುಗಿ ಆವರಿಸಿತು. ನಮಾಜೂ ಭಜನೆಯೂ ಎಂದಿನಂತೆ ನಡೆದಿದ್ದುವು. ಆದರೆ ಅದರಲ್ಲಿ ಆ ಸಂಕಟಸಮಯದ ಶ್ರದ್ಧೆ, ಗಾಂಭೀರ್ಯ ಇರಲಿಲ್ಲ.

ಈ ಬಿರುಗಾಳಿಯಿಂದ ನನಗೆ ಪ್ರಯಾಣಿಕರೊಡನೆ ಹೆಚ್ಚಾಗಿ ಬೆರೆಯಲು ಅನುವು ದೊರೆಯಿತು. ನನಗೆ ಬಿರುಗಾಳಿಯ ಹೆದರಿಕೆ ಇರಲಿಲ್ಲ.

ನಾನು ಇಂತಹ ಎಷ್ಟೋ ಬಿರುಗಾಳಿ ಕಂಡಿದ್ದೆ. ಸಮುದ್ರ ಪ್ರಯಾಣ ನನಗೆ ಒಂಟಿಬಿಟ್ಟಿದೆ. ಕಡಲಪಯಣದ ಕಾಲಕ್ಕೆ ನನಗೆ ತಲೆ ತಿರುಗುವುದಿಲ್ಲ. ವಾಂತಿ ಬರುವುದಿಲ್ಲ. ಆದ್ದರಿಂದ ಪ್ರಯಾಣಿಕರಲ್ಲಿ ಸಮಾಧಾನವನ್ನೂ ಉತ್ಸಾಹವನ್ನೂ ತುಂಬುತ್ತ, ಹಡಗಿನ ಮುಖ್ಯಾಧಿಕಾರಿ ಗಂಟೆ-ಗಂಟೆಗೆ ಹೇಳುವ ವರದಿಯನ್ನು ಅವರಿಗೆ ತಿಳಿಸುತ್ತ ಅವರ ನಡುವೆ ಹೆದರಿಕೆ ಇಲ್ಲದೆ ತಿರುಗಾಡುತಿದ್ದೆ. ಪ್ರಯಾಣಿಕರಲ್ಲಿ ಬೆಳಸಿದ ಈ ಸಲಿಗೆ ನನಗೆ ಮುಂದೆ ಬಹಳ ಪ್ರಯೋಜನಕಾರಿಯಾಯಿತು.

ನಮ್ಮ ಹಡಗು ಡಿಸೆಂಬರ್ ೧೮ ಅಥವಾ ೧೯ರಲ್ಲಿ ಡರ್ಬನ್ ರೇವು ಸೇರಿತು. ನಾದೇರಿ ಹಡಗೂ ಅಷ್ಟೇ. ನಿಜವಾದ ಚಂಡಮಾರುತ ಇನ್ನು ಮುಂದೆ ಏಳುವುದರಲ್ಲಿತ್ತು.

## ೧೭. ಬಿಳಿ ಜನಜಂಗುಳಿಯು ಚಿತ್ರಹಿಂಸೆ *

ನಮ್ಮ ಹಡಗು ಕಡಲಲ್ಲಿಯೆ ನಿಲ್ಲಬೇಕೆಂಬ ದಕ್ಷಿಣ ಆಫ್ರಿಕಾ ಸರಕಾರದ ಆಜ್ಞೆ ೨೩ನೇ ದಿನ ಕೊನೆಗೊಂಡಿತು. ಹಡಗಿನ ಪ್ರಯಾಣಿಕರ ಮೂಲಕ ಸುಂಕರೋಗ ಹಬ್ಬುವ ಭಯವಿದ್ದರೆ ಇಂತಹ ಆಜ್ಞೆ ಮಾಡುವುದುಂಟು. ಇಲ್ಲಿ ಅಂತಹ ಹೆದರಿಕೆ ಇರಲಿಲ್ಲ. ಇಲ್ಲಿ ಇದ್ದುದು ರಾಜಕೀಯ ವಿಚಾರ ಪ್ರಸಾರಣೆಯ ಭಯ. ಅಂತೂ ನಮ್ಮ ಎರಡೂ ಹಡಗು ಆಜ್ಞೆ ಕೊನೆಗೊಂಡ ಮೇಲೆ ರೇವು ಸೇರಿದುವು. ಪ್ರಯಾಣಿಕರು ಇಳಿಯತೊಡಗಿದರು. ಆಗ ಶ್ರೀ. ಎಸ್ಕೊಂಬರು– ಸರಕಾರದ ಒಬ್ಬ ಮಂತ್ರಿ— ಹಡಗಿನ ಅಧಿಕಾರಿಗೆ ಹೀಗೆ ಹೇಳಿಕಳಿಸಿದರು:— "ಗಾಂಧಿಯವರ ವಿಷಯದಲ್ಲಿ ಬಿಳಿಯರು ಬಹಳ ರೇಗಿಬಿಟ್ಟಿದ್ದಾರೆ. ಆದ್ದರಿಂದ ಬಹುಶಃ ಅವರಿಗೆ ತೊಂದರೆ ತಪ್ಪಿದ್ದಲ್ಲ. ಇದಕ್ಕಾಗಿ ಅವರು ಕುಟುಂಬದೊಂದಿಗೆ ಕತ್ತಲು ಕವಿದ ಮೇಲೆ ಹಡಗಿನಿಂದ

* ಅಮೇರಿಕೆಯಲ್ಲಿಯೂ ಆಫ್ರಿಕೆಯಲ್ಲಿಯೂ ನಿಗ್ರೊ ಮುಂತಾದ ಕಪ್ಪು ಬಣ್ಣದವರಿಗೆ ಬಿಳಿಯರು ಚಿತ್ರ ಹಿಂಸೆ ಕೊಡುತ್ತಾರೆ. ಇದು ಅಪರಾಧವೇ ಅಲ್ಲವೆಂಬಂತೆ ಅಲ್ಲಿಯ ಸರಕಾರಗಳು ಅಲಕ್ಷಿಸುತ್ತವೆ. ಹೀಗೆ ಹಿಂಸೆ ಪಡಿಸುವುದಕ್ಕೆ ಅಲ್ಲಿ ಲಿಂಚಿಂಗ್ (Lynching) ಎಂಬ ವಿಶಿಷ್ಟ ಶಬ್ದವೇ ಬಳಿಕೆಯಲ್ಲಿದೆ.

ಇಳಿಯಲಿ. ಬಂದರಿನ ಮೇಲ್ವಿಚಾರಕ ಶ್ರೀ. ಟಾಟುಮರು ಅವರನ್ನು ಕರೆದೊಯ್ಯುವರು.” ಹಡಗಿನ ಮುಖ್ಯಸ್ಥನಿಂದ ನಮಗೆ ಈ ಸುದ್ದಿ ತಿಳಿಯಿತು. ಇದಕ್ಕೆ ನಾನು ಒಪ್ಪಿದೆ. ಇದಾಗಿ ಅರ್ಧ ಗಂಟೆಯ ಒಳಗೆ ಶ್ರೀ. ಲಾಫ್ಟನ್ನರು ಬಂದರು. ಅವರು ಹೆಸರಾದ ವಕೀಲರು. ಅವರು ಅಧಿಕಾರಿಯ ಬಳಿಗೆ ಬಂದು “ಗಾಂಧಿಯವರ ಅಭ್ಯಂತರವೇನೂ ಇಲ್ಲದಿದ್ದರೆ ಅವರನ್ನು ನಾನು ಕರೆದೊಯ್ಯುತ್ತೇನೆ. ಶ್ರೀ. ಎಸ್ಕೊಂಬರ ಸಲಹೆಯಂತೆ ನೀವು ನಡೆಯಬೇಕಾದ ಆಗತ್ಯವಿಲ್ಲ. ನಾನೀಗ ಹೇಳುತ್ತಿರುವುದು ದಾದಾ ಅಬ್ದುಲ್ಲಾ ಕಂಪನಿಯ ವಕೀಲನಾಗಿ'' ಎಂದರು. ಆಮೇಲೆ ನನ್ನ ಹತ್ತಿರ ಬಂದು “ನಿಮಗೆ ಹೆದರಿಕೆ ಇಲ್ಲದಿದ್ದರೆ ನಿಮ್ಮ ಹೆಂಡತಿ ಮಕ್ಕಳು ರುಸ್ತುಂಜಿಯವರ ಮನೆಗೆ ಬಂಡಿಯಲ್ಲಿ ಹೋಗಲಿ. ನಾವಿಬ್ಬರೂ ನಡೆಯುತ್ತ ಹೋಗೋಣ. ಕಳ್ಳರಂತೆ ರಾತ್ರಿ ಊರು ಸೇರುವುದು ನನಗೇಕೊ ಸರಿದೋರುವುದಿಲ್ಲ. ಹಾದಿಯಲ್ಲಿ ಯಾರೂ ತೊಂದರೆ ಕೊಡುವ ಭಯವಿದ್ದಂತೆ ಕಾಣೆ. ಈಗ ಎಲ್ಲವೂ ಶಾಂತವಾಗಿದೆ. ಗುಂಪುಕೂಡಿದ ಬಿಳಿಯರೆಲ್ಲ ಹೊರಟುಹೋಗಿದ್ದಾರೆ. ಹೇಗಿದ್ದರೂ ನೀವು ಕಳ್ಳತನದಿಂದ ಎಂದಿಗೂ ಪಟ್ಟಣಕ್ಕೆ ಹೋಗಕೂಡದೆಂದು ನನ್ನ ಅಭಿಪ್ರಾಯ” ಎಂದರು. ಇದನ್ನು ನಾನು ಒಪ್ಪಿಕೊಂಡು ಬಿಟ್ಟೆ. ಹೆಂಡತಿ ಮಕ್ಕಳು ಸುರಕ್ಷಿತವಾಗಿ ರುಸ್ತುಂಜಿಯವರ ಮನೆಗೆ ಹೋದರು. ಅಧಿಕಾರಿಯ ಅಪ್ಪಣೆ ಪಡೆದು ನಾನು ಶ್ರೀ. ಲಾಫ್ಟನ್ ರೊಂದಿಗೆ ದಡಸೇರಿದೆ. ಶ್ರೀ. ರುಸ್ತುಂಜಿಯವರ ಮನೆ ರೇವಿನಿಂದ ಎರಡು ಮೈಲು ದೂರದಲ್ಲಿತ್ತು.

ನಾವು ದಂಡೆಗೆ ಕಾಲಿಡುತ್ತಿರುವಾಗಲೇ ಕೆಲವು ಬಿಳಿ ಹುಡುಗರು ನನ್ನನ್ನು ಗುರುತಿಸಿ ಕೂಗತೊಡಗಿದರು—‘ಗಾಂಧಿ! ಗಾಂಧಿ!’ ಅಷ್ಟರಲ್ಲಿ ಈ ಕೂಗಿಗೆ ತಮ್ಮ ಕೂಗನ್ನು ಸೇರಿಸುತ್ತ ಅಲ್ಲಿಗೆ ಇನ್ನೂ ಐದಾರು ಜನ ಓಡಿಬಂದರು. ಈ ಗುಂಪು ಇನ್ನೂ ಹೆಚ್ಚಬಹುದೆಂದು ಹೆದರಿ ಲಾಫ್ಟನ್ನರು ಒಂದು ರಿಕ್ಷಾ ಕರೆದರು. ಮನುಷ್ಯರು ಎಳೆಯುವ ಈ ಬಂಡಿಯಲ್ಲಿ ಹೋಗುವುದು ನನಗೆ ಒಗ್ಗದ ಮಾತು. ನಾನು ಅದರಲ್ಲಿ ಕುಳಿತುಕೊಳ್ಳುವುದು ಅದೇ ಮೊದಲ ಸಲ. ಹುಡುಗರು ನನ್ನನ್ನು ಒಳಗೆ ಹೋಗಗೊಡಲಿಲ್ಲ. ರಿಕ್ಷಾ ಎಳೆಯುವ ಹುಡುಗನನ್ನು ಈ ಗುಂಪು ಹೆದರಿಸಿಬಿಟ್ಟಿದ್ದರಿಂದ ಅವನು ಕಂಬಿಕಿತ್ತು ಬಿಟ್ಟ. ಹೀಗೆ ನಮಗೆ ನಡೆಯದೆ ಬೇರೆ ಉಪಾಯವೇ ಉಳಿಯಲಿಲ್ಲ.

ಮುಂದೆ ಮುಂದೆ ಹೋದಂತೆ ಗುಂಪು ಬೆಳೆಯುತ್ತ ನಡೆಯಿತು. ಕೊನೆಗೆ ಹೆಜ್ಜೆ ಇಡುವುದೇ ಅಸಾಧ್ಯವಾಯಿತು. ಗುಂಪಿನೊಳಗಿನ ಕೆಲವರು ಮೊದಲು ಶ್ರೀ. ಲಾಫ್ಟನ್ನರನ್ನು ಹಿಡಿದೆಳೆದು ನನ್ನಿಂದ ಅವರನ್ನು ಅಗಲಿಸಿದರು. ಆ ಮೇಲೆ ನನ್ನ ಮೇಲೆ ಕಲ್ಲು, ಇಟ್ಟಿಂಗಿಯ ತುಂಡು, ಕೊಳೆತ ಮೊಟ್ಟೆ ಮುಂತಾದುವನ್ನು ಎಸೆಯತೊಡಗಿದರು. ಯಾರೊ ನನ್ನ ರುಮಾಲು ಹಿಡಿದೆಳೆದರು. ಇನ್ನು ಯಾರೊ ಹೊಡೆತ ಒದೆತಗಳನ್ನು ಮೊದಲಿಸಿದರು. ನನಗೆ ಬವಳಿ ಬಂದಂತಾಯಿತು. ಆಗ ವಿಶ್ರಮಿಸಿಕೊಳ್ಳುವುದಕ್ಕಾಗಿ ಹತ್ತಿರದಲ್ಲಿದ್ದ ಒಂದು ಮನೆಯ ಮುಂದುಗಡೆಯ ಕಟಾಂಜನ ಹಿಡಿದುಕೊಂಡು ನಿಂತೆ. ಆದರೆ ಹಾಗೆ ನಿಲ್ಲಲು ಸಾಧ್ಯವಾಗಲಿಲ್ಲ. ಈ ಜನಜಂಗುಳಿ ನನ್ನ ಮೇಲೆ ನುಗ್ಗಿ ಬಂದು ಗುದ್ದುವುದಕ್ಕೂ ಹೊಡೆಯುವುದಕ್ಕೂ ಆರಂಭಿಸಿತು. ಆಗ ಅಲ್ಲಿಯೆ ಹೋಗುತಿದ್ದ ಪೋಲೀಸ್ ಸುಪರಿಂಟೆಂಡೆಂಟರ ಹೆಂಡತಿ ಇದನ್ನು ನೋಡಿದರು. ಅವರು ನನ್ನನ್ನು ಬಲ್ಲರು. ಈ ಹೆಂಗುಸು ನನಗೂ ಗುಂಪಿಗೂ ನಡುವೆ ತನ್ನ ಬಿಡಿಸಿದ ಕೊಡೆ ಹಿಡಿದುಕೊಂಡು ಮಹಾಧೈರ್ಯದಿಂದ ನಿಂತುಬಿಟ್ಟರು. ಇದರಿಂದ ಕೇಡಿಗಳ ಗುಂಪಿಗೆ ತನ್ನ ರೋಷ ತೀರಿಸಿಕೊಳ್ಳಲು ಸಾಧ್ಯವಿಲ್ಲದೆ ಹೋಯಿತು. ಏಕೆಂದರೆ ಶ್ರೀಮತಿ ಅಲೆಕ್ಸಾಂಡರರನ್ನು ತಪ್ಪಿಸಿ ನನ್ನನ್ನು ಹೊಡೆಯುವುದು ಸಾಧ್ಯವಿರಲಿಲ್ಲ.

ಇದೆಲ್ಲವನ್ನು ನೋಡುತ್ತಲಿದ್ದ ಒಬ್ಬ ಹಿಂದೀ ತರುಣ ಅಷ್ಟರಲ್ಲಿ ಪೋಲೀಸ್ ಚಾವಡಿಗೆ ಓಡಿದ್ದ. ಪೋಲೀಸ್ ಸುಪರಿಂಟೆಂಡೆಂಟ್ ಅಲೆಕ್ಸಾಂಡರರು ನನ್ನ ಬೆಂಗಾವಲಿಗೆ ಒಂದು ಚಿಕ್ಕ ಪೋಲೀಸ್ ದಳ ಕಳಿಸಿದರು. ಅದು ಹೊತ್ತಿಗೆ ಸರಿಯಾಗಿ ಬಂದಿತು. ಪೋಲೀಸ್ ಚಾವಡಿ ರುಸ್ತುಂಜಿಯವರ ಮನೆಯ ದಾರಿಯಲ್ಲಿ ಇತ್ತು. ನಾನು ಪೋಲೀಸ್ ಕಾವಲಿನಿಂದ ಚಾವಡಿಗೆ ಬಂದೆ. ಆಗ ನನಗೆ ಅಲೆಕ್ಸಾಂಡರರು ಅಲ್ಲಿಯೆ ಇರಲು ಹೇಳಿದರು. ಆದರೆ ಅದನ್ನು ವಿನಯಪೂರ್ವಕವಾಗಿ ನಿರಾಕರಿಸಿದೆ. 'ತಮ್ಮ ತಪ್ಪು ತಿಳಿದೊಡನೆ ಅವರು ಸುಮ್ಮನಾಗುವರು. ಈ ಕೆಲಸ ಅವರು ಪ್ರಾಮಾಣಿಕತನದಿಂದಲೇ ಮಾಡುತಿದ್ದಾರೆ' ಎಂದೆ ನಾನು. ಅಂತೂ ಪೋಲೀಸ್ ಪಡೆಯ ನೆರವು ಪಡೆದು ಯಾವ ತೊಂದರೆಯೂ ಇಲ್ಲದೆ ರುಸ್ತುಂಜಿಯವರ ಮನೆ ಸೇರಿದೆ. ನನ್ನ ಮೈಯೆಲ್ಲ ನುಗ್ಗಾಗಿದ್ದಿತು. ಒಂದು ಕಡೆ ಮಾತ್ರ ಗಾಯವಾಗಿದ್ದಿತು.

ಹಡಗಿನ ವೈದ್ಯರಾದ ಡಾ. ದಾದಿಬಾಜೋರ್‌ರರು ಅಲ್ಲಿಯೆ ಇದ್ದರು. ಅವರು ನನಗೆ ಬಹಳ ಚೆನ್ನಾಗಿ ಆರೈಕೆ ಮಾಡಿದರು.

ರುಸ್ತುಂಜಿಯವರ ಮನೆಯ ಒಳಗೆ ಎಲ್ಲವೂ ಶಾಂತವಿತ್ತು; ಹೊರಗೋ ಮನೆಯನ್ನೆಲ್ಲ ಬಿಳಿಯರು ಸುತ್ತುಗಟ್ಟಿದ್ದರು. ಮೆಲ್ಲಮೆಲ್ಲಗೆ ರಾತ್ರಿಯಾಗುತ್ತಲಿದ್ದಿತು. ದೊಂಬಿಗಾರರು 'ನಮಗೆ ಗಾಂಧಿ ಬೇಕು' ಎಂದು ಕೂಗುತ್ತಲಿದ್ದರು. ಪೋಲೀಸ್ ಆಡಳಿತೆಗಾರರಾದ ಶ್ರೀ. ಅಲೆಕ್ಸಾಂಡರರು ಬಹಳ ಸೂಕ್ಷ್ಮ ವಿಚಾರಿಗಳು. ಅಷ್ಟರಲ್ಲಿ ಅವರು ಅಲ್ಲಿಗೆ ಬಂದು ಕೇಡಿಗಳನ್ನು ಅಂಕೆಗೆ ತರಲು ಯತ್ನಿಸುತಿದ್ದರು—ಹೆದರಿಸುವುದರಿಂದಲ್ಲ, ಹಾಸ್ಯ ವಿನೋದಗಳಿಂದ. ಅವರಿಗೂ ಒಳಗೆ ಕಳವಳವಿದ್ದೇ ಇತ್ತು. ಅಂತೆಯೆ ಅವರು ನನಗೆ 'ನಿಮ್ಮ ಸ್ನೇಹಿತರ ಮನೆಮಾರನ್ನೂ ನಿಮ್ಮ ಕುಟುಂಬವನ್ನೂ ಉಳಿಸಬೇಕೆಂದಿದ್ದರೆ ನೀವು ವೇಷ ಬದಲಿಸಿ ತಪ್ಪಿಸಿಕೊಂಡು ಹೋಗಬೇಕು' ಎಂದು ಹೇಳಿಕಳಿಸಿದರು.

ಪೋಲೀಸ್ ಮೇಲ್ವಿಚಾರಕರ ಸೂಚನೆಯಂತೆ ನಾನು ಭಾರತೀಯ ತಳವಾರನ ಉಡುಪು ತೊಟ್ಟುಕೊಂಡೆ. ನನ್ನೊಂದಿಗೆ ಇಬ್ಬರು ಗೂಢಚಾರರು ಬಂದರು. ಅವರಲ್ಲಿ ಒಬ್ಬ ಹಿಂದೀ ವ್ಯಾಪಾರಿಯ ವೇಷ ಹಾಕಿದ. ಭಾರತೀಯನಂತೆ ಕಾಣಲು ಅವನ ಮೋರೆಗೆ ಬಣ್ಣ ಬಳಿದಿತ್ತು. ಇನ್ನೊಬ್ಬನ ಸೋಗು ಯಾವುದೆಂದು ಈಗ ನನಗೆ ನೆನಸಿಲ್ಲ. ನಾವು ಮೂವರೂ ಒಂದು ಓಣಿಯ ಮೂಲಕ ಪಕ್ಕದ ಅಂಗಡಿಗೆ ಹೋದೆವು. ಅಲ್ಲಿಯ ಉಗ್ರಾಣದಲ್ಲಿ ತುಂಬಿದ್ದ ಚೀಲಗಳ ನಡುವೆ ತೂರಿಕೊಂಡು ಆ ಅಂಗಡಿಯ ಬಾಗಿಲಿನಿಂದ ಹೊರಗೆ ಬಂದೆವು. ಬಳಿಕ ಆ ಡೊಂಬಿಕಾರರ ನಡುವಿನಿಂದಲೇ ನಡೆದು ಆ ಬೀದಿಯ ಕೊನೆಯಲ್ಲಿ ನನಗಾಗಿ ಏರ್ಪಡಿಸಿದ್ದ ಬಂಡಿ ಸೇರಿದೆವು. ಆ ಬಂಡಿಯಲ್ಲಿ ಕುಳಿತು, ಸ್ವಲ್ಪ ಹೊತ್ತಿನ ಹಿಂದೆ ಅಲೆಕ್ಸಾಂಡರರು ಯಾವ ಚಾವಡಿಯಲ್ಲಿ ರಕ್ಷಣೆ ಪಡೆಯಲು ಹೇಳಿದ್ದರೊ ಅದೇ ಚಾವಡಿಗೆ ಈಗ ಹೋದೆವು. ಈ ನೆರವಿಗಾಗಿ ಅವರಿಗೂ ಗೂಢಚಾರರಿಗೂ ಕೃತಜ್ಞತೆ ಸಲ್ಲಿಸಿದೆ.

ಇತ್ತ ನಾನು ತಲೆ ಮರೆಸಿಕೊಂಡು ಹೋಗುತ್ತಿರುವಾಗ ಅತ್ತ ಅಲೆಕ್ಸಾಂಡರರು 'ಗಾಂಧಿಯನ್ನು ಹುಣಸೇ ಮರಕ್ಕೆ ನೇಣುಹಾಕಿರಿ' ಎಂದು ಹಾಡುತ್ತ ಆ ಜಂಗುಳಿಯೊಡನೆ ಚೆಲ್ಲಾಟವಾಡುತಿದ್ದರು. ನಾನು ಸುರಕ್ಷಿತ

ವಾಗಿ ಚಾವಡಿಗೆ ತಲುಪಿದ ಸುದ್ದಿ ಅಲೆಕ್ಸಾಂಡರರಿಗೆ ಸಿಕ್ಕಿತು. ಆಗ ಅವರು ಕೇಡಿಗಳ ಆ ಗುಂಪಿಗೆ 'ನೋಡಿರಿ, ನೀವು ಬಲಿಹಾಕಬೇಕೆಂದು ಹೊಂಚು ಹಾಕಿದ್ದ ಮನುಷ್ಯ ಪಕ್ಕದ ಅಂಗಡಿಯ ಮೂಲಕ ಓಡಿಹೋಗಿಬಿಟ್ಟಿದ್ದಾನೆ. ಈಗ ನೀವೆಲ್ಲರೂ ಮನೆ ಸೇರುವದೇ ಲೇಸು' ಎಂದರು. ಇದರಿಂದ ಕೆಲವರ ಪಿತ್ಥ ನೆತ್ತಿಗೇರಿತು. ಕೆಲವರು ನಕ್ಕುಬಿಟ್ಟರು. ಹಲವರಿಗೆ ಈ ಮಾತಿನ ನಂಬಿಗೆ ಆಗಲಿಲ್ಲ.

ಆಗ ಪೋಲೀಸ್ ಆಡಳಿತೆಗಾರರು ಆ ಗುಂಪಿಗೆ 'ಒಳ್ಳೇದು, ನಿಮಗೆ ನನ್ನಲ್ಲಿ ನಂಬಿಗೆ ಇಲ್ಲದಿದ್ದರೆ ನಿಮ್ಮೊಳಗಿನ ಒಬ್ಬಿಬ್ಬರನ್ನು ನನ್ನ ಜೊತೆಗೆ ಒಳಗೆ ಕಳಿಸಿರಿ. ಒಳಗೆ ಗಾಂಧಿ ಇದ್ದರೆ ಅವನನ್ನು ನಿಮ್ಮ ವಶಕೊಡಲು ಏನೂ ಆಕ್ಷೇಪಣೆ ಇಲ್ಲ. ಅವನು ಸಿಗದಿದ್ದರೆ ನೀವೆಲ್ಲರೂ ಹೊರಟು ಹೋಗ ಬೇಕು. ರುಸ್ತುಂಜಿಯವರ ಮನೆಗಾಗಲಿ, ಗಾಂಧಿಯವರ ಹೆಂಡತಿ ಮಕ್ಕಳಿ ಗಾಗಲಿ ಏನೂ ಅಪಾಯವಾಗಕೂಡದು' ಎಂದರು.

ನನ್ನನ್ನು ಹುಡುಕಲು ಗುಂಪಿನೊಳಗಿನ ಇಬ್ಬರು ಒಳಕ್ಕೆ ಹೋಗಿ ಮುಖ ಸಪ್ಪಗೆ ಮಾಡಿಕೊಂಡು ಬಂದರು. ಈ ಸಂದರ್ಭದಲ್ಲಿ ಪೋಲೀಸ್ ಸುಪರಿಂಟೆಂಡೆಂಟರು ತೋರಿಸಿದ ಜಾಣತನಕ್ಕೆ ಮುಕ್ಕಾಲು ಪಾಲು ಜನ ತಲೆದೂಗಿದರು. ಕೆಲವರು ಮಾತ್ರ ಸಿಟ್ಟಿನಿಂದ ಸಿಡಿಮಿಡಿಗೊಂಡರು. ಅಂತೂ ಕೊನೆಗೆ ಗುಂಪಿಗೆ ಗುಂಪೇ ಕರಗಿಹೋಯಿತು.

ಆಗ ಬ್ರಿಟಿಷ್ ವಸಾಹತು ಮಂತ್ರಿಗಳಾಗಿದ್ದವರು ದಿವಂಗತ ಚೆಂಬರ್ಲೇನ ನರು. ನನಗೆ ಹಿಂಸೆ ಪಡಿಸಿದವರನ್ನು ಹಿಡಿದು ಕಟ್ಟಳೆಗೆ ಗುರಿಪಡಿಸ ಬೇಕೆಂದು ಅವರು ನೇಟಾಲ್ ಸರಕಾರಕ್ಕೆ ತಂತಿಕೊಟ್ಟರು. ಶ್ರೀ. ಎಸ್ಕುಂಬರು ನನ್ನನ್ನು ಬರಮಾಡಿಕೊಂಡು ನನಗಾದ ಅನ್ಯಾಯಕ್ಕಾಗಿ ವ್ಯಸನ ಸೂಚಿ ಸುತ್ತ 'ನಿಮಗೆ ತೀರ ಸ್ವಲ್ಪ ನೋವಾಗಿದ್ದರೂ ನನ್ನ ಮನಸ್ಸಿಗೆ ನೆಮ್ಮದಿ ಇಲ್ಲ ಲಾಫ್ಟನ್ನರ ಸಲಹೆಯಂತೆ ನಡೆಯಲು ನೀವು ಸ್ವತಂತ್ರರೇ ಇದ್ದೀರಿ. ಆದರೆ ನಾನು ಹೇಳಿದಂತೆ ಕೇಳಿದ್ದರೆ ಖಂಡಿತವಾಗಿ ಈ ವಿಷಾದಘಟನೆ ನಡೆ ಯುತ್ತಿರಲಿಲ್ಲ. ತಪ್ಪಿತಸ್ಥರನ್ನು ನೀವು ಗುರುತಿಸಬಲ್ಲಿರಾದರೆ ಅವರನ್ನು ಹಿಡಿದು ತಕ್ಕ ಶಿಕ್ಷೆ ಕೊಡಲು ಸಿದ್ಧನಿದ್ದೇನೆ. ಶ್ರೀ. ಚೆಂಬರ್ಲೇನರೂ ಹಾಗೆಯೆ ಬಯಸುತ್ತಾರೆ' ಎಂದರು.

ಅದಕ್ಕೆ ನಾನು ಹೀಗೆ ಉತ್ತರಕೊಟ್ಟೆ:— " ನನಗೆ ಯಾರನ್ನೂ ನ್ಯಾಯಾಸ್ಥಾನಕ್ಕೆ ಎಳೆಯುವ ಇಚ್ಛೆ ಇಲ್ಲ. ಒಬ್ಬಿಬ್ಬರನ್ನೇನೊ ನಾನು ಗುರುತಿಸಬಹುದು. ಆದರೆ ಅವರನ್ನು ಶಿಕ್ಷಿಸುವುದರಿಂದ ಪ್ರಯೋಜನವೇನು? ಇದಲ್ಲದೆ ಈ ತುಂಟರು ತಪ್ಪುಗಾರರೆಂದು ನಾನು ತಿಳಿದಿಲ್ಲ. ಹಿಂದುಸ್ಥಾನದ ನನ್ನ ಭಾಷಣಗಳಲ್ಲಿ ನೇಟಾಲಿನ ಬಿಳಿಯರನ್ನು ಕುರಿತು ಒಂದಕ್ಕೆ ಹತ್ತು ಮಾಡಿ ಹೇಳಿ ಅಪಮಾನ ಮಾಡಿದೆನೆಂದು ಅವರಿಗೆ ತಿಳಿದುಬಂತು. ಈ ಸುದ್ದಿ ನಂಬಿದ್ದೇ ಆದರೆ ಅವರು ರೇಗಿದ್ದರಲ್ಲಿ ಆಶ್ಚರ್ಯವಿಲ್ಲ. ಈ ತಪ್ಪು ಮುಂದಾಳುಗಳದು– ನಾನು ಸ್ಪಷ್ಟವಾಗಿ ಹೇಳಬಹುದಾದರೆ ನಿಮ್ಮದು. ನೀವು ಜನರಿಗೆ ಸರಿಯಾದ ದಾರಿ ತೋರಿಸಬಹುದಾಗಿದ್ದಿತು. ನೀವೂ ರಾಯಿಟರ್ ಸುದ್ದಿ ನಂಬಿ ನಾನು ಅತಿಶಯೋಕ್ತಿಯ ಸಂಗತಿ ಹೇಳಿರಬಹುದೆಂದು ತಿಳಿದಿರಿ. ಯಾರನ್ನೂ ಶಿಕ್ಷೆಗೆ ಗುರಿಮಾಡುವ ಇಚ್ಛೆ ನನಗಿಲ್ಲ. ಸತ್ಯಸಂಗತಿ ತಿಳಿದ ಕೂಡಲೇ ಅವರಿಗೆ ಪಶ್ಚಾತ್ತಾಪವಾಗುವುದೆಂದು ನನಗೆ ಖಂಡಿತ ಗೊತ್ತು. "

" ಇದನ್ನು ಬರೆದುಕೊಡುವಿರಾ! ನೀವು ಹೀಗೆ ಹೇಳಿದಿರೆಂದು ನಾನು ಚೆಂಬರ್ಲೀನರಿಗೆ ತಿಳಿಸಬೇಕು. ನೀವು ಯಾವ ಮಾತನ್ನೂ ಲಗುಬಗೆಯಿಂದ ಹೇಳಕೂಡದು. ಲಾಫ್ಟನ್ನರನ್ನೂ ಬೇರೆ ಸ್ನೇಹಿತರನ್ನೂ ಕೇಳಿ ನೀವು ಯಾವುದೊಂದು ನಿರ್ಣಯ ಮಾಡುವುದು ಒಳಿತು. ಕೇಡಿಗಳನ್ನು ದಂಡಿಸುವ ಯೋಚನೆ ಬಿಟ್ಟುಕೊಟ್ಟರೆ ಶಾಂತತೆ ಕಾಯಲು ನನಗೆ ಸಹಾಯ ಮಾಡಿದಂತಾಗುತ್ತದೆ. ಇದಲ್ಲದೆ ನಿಮ್ಮ ಕೀರ್ತಿಯೂ ಹೆಚ್ಚುವುದು. "

" ಹಾಗೆಯೆ ಆಗಲಿ. ನಾನು ಯಾರನ್ನೂ ಕೇಳಬೇಕಾದುದಿಲ್ಲ. ಇಲ್ಲಿಗೆ ಬರುವ ಮೊದಲೇ ನಾನು ಈ ನಿರ್ಧಾರಕ್ಕೆ ಬಂದಿದ್ದೆ. ಈ ತುಂಟರನ್ನು ನ್ಯಾಯಾಸ್ಥಾನಕ್ಕೆ ಎಳೆಯಬಾರದೆಂಬುದೇ ನನ್ನ ನಿಶ್ಚಯ. ಬೇಕಾದರೆ ಈಗಲೇ ಇದನ್ನು ಬರೆದು ಕೊಡುತ್ತೇನೆ " ಎಂದು, ಅವಶ್ಯಕವಾದ ಹೇಳಿಕೆ ಬರೆದುಕೊಟ್ಟೆ.

ಎರಡು ದಿನಗಳ ಮೇಲೆ ಶ್ರೀ. ಎಸ್ಕುಂಬರನ್ನು ಕಾಣಲು ಹೋದೆ. ಇನ್ನೂ ಆಗ ನಾನು ಪೋಲೀಸ್ ಚಾವಡಿಯಲ್ಲೇ ಇದ್ದೆ. ಅಗತ್ಯವಿಲ್ಲದಿದ್ದರೂ ನನ್ನ ಬೆಂಗಾವಲಿಗಾಗಿ ಇಬ್ಬರು ಪೋಲಿಸರು ಬಂದಿದ್ದರು.

ನಾವು ಹಡಗು ಇಳಿದ ದಿನ, ಹಳದಿ ಬಾವುಟ ಇಳಿಸಿದ ಕೂಡಲೇ, 'ನೇಟಾಲ್ ಎಡ್ವರ್ಟೈಜರ್' ಪತ್ರಿಕೆಯ ಒಬ್ಬ ಪ್ರತಿನಿಧಿ ನನ್ನ ಬಳಿಗೆ ಬಂದಿದ್ದ. ಅವನು ನನಗೆ ಎಷ್ಟೋ ಪ್ರಶ್ನೆ ಕೇಳಿದ. ಆಗ, ನನ್ನ ಮೇಲಿನ ಎಲ್ಲ ಆರೋಪಗಳನ್ನು ಖಂಡಿಸಿದೆ. ಹಿಂದುಸ್ಥಾನದಲ್ಲಿ ನಾನು ಮಾಡಿದ ಭಾಷಣಗಳನ್ನು ಮೊದಲಿಗೇ ಬರೆದು ಸಿದ್ಧಗೊಳಿಸಿದ್ದೆ. ಈ ಕ್ರಮ ಸರ್ ಫಿರೋಜ್‌ಶಹ ಮೇಥಾ ಅವರಿಂದ ಕಲಿತದ್ದು. ಹಿಂದುಸ್ಥಾನದಲ್ಲಿ ಮಾಡಿದ ಈ ಭಾಷಣಗಳೂ ನನ್ನ ಉಳಿದ ಬರಹಗಳೂ ನನ್ನಲ್ಲಿದ್ದುವು. ಈ ಎಲ್ಲ ಸಾಹಿತ್ಯವನ್ನೂ ಆ ಪ್ರತಿನಿಧಿಗೆ ಕೊಟ್ಟೆ. ಮತ್ತು ದಕ್ಷಿಣ ಆಫ್ರಿಕೆಯಲ್ಲಿ ಈ ಮೊದಲೇ ಸ್ಪಷ್ಟೋಕ್ತಿಯಿಂದ ಹೇಳಿದ್ದಕ್ಕಿಂತ ಹೆಚ್ಚಾಗಿ ಹಿಂದುಸ್ಥಾನದಲ್ಲಿ ಏನನ್ನೂ ಹೇಳಲಿಲ್ಲವೆಂದು ಅವನಿಗೆ ತೋರಿಸಿಕೊಟ್ಟೆ. ಕೋರ್‌ಲ್ಯಾಂಡ್ ಮತ್ತು ನಾದೇರಿ ಹಡಗಿನ ಪ್ರಯಾಣಿಕರನ್ನು ತರುವಲ್ಲಿ ನನ್ನ ಕೈವಾಡವೇನೂ ಇರಲಿಲ್ಲವೆಂದೂ ಅವನಿಗೆ ಮನಗಾಣಿಸಿದೆ. ಆ ಪ್ರಯಾಣಿಕರಲ್ಲಿ ಅನೇಕರು ದಕ್ಷಿಣ ಆಫ್ರಿಕೆಯಲ್ಲಿ ಬಹುಕಾಲದಿಂದ ನೆಲಸಿದವರು. ಮುಕ್ಕಾಲು ಪಾಲು ಜನಕ್ಕೆ ಟ್ರಾನ್ಸ್‌ವಾಲಿಗೆ ಹೋಗುವುದಿತ್ತು; ನೇಟಾಲಿನಲ್ಲಿರುವ ಉದ್ದೇಶವಿರಲಿಲ್ಲ. ಹಣಗಳಿಸಬೇಕೆನ್ನುವವರಿಗೆ ಆಗಿನ ಕಾಲದಲ್ಲಿ ನೇಟಾಲಿಗಿಂತ ಟ್ರಾನ್ಸ್‌ವಾಲೇ ಅನುಕೂಲವಾಗಿತ್ತು. ಆದ್ದರಿಂದ ಹೆಚ್ಚು ಜನ ಭಾರತೀಯರು ಅಲ್ಲಿಗೆ ಹೋಗಬಯಸುತ್ತಿದ್ದರು.

ಪತ್ರಿಕಾ ಪ್ರತಿನಿಧಿಯೊಡನೆ ಆದ ಈ ಸಂದರ್ಶನವೂ ಕೇಡಿಗಳನ್ನು ದಂಡಿಸಲು ನಾನು ನಿರಾಕರಿಸಿದ್ದೂ ಅಲ್ಲಿ ಬಹಳ ಆಳವಾದ ಪರಿಣಾಮವನ್ನುಂಟು ಮಾಡಿತು. ಅಲ್ಲಿಯ ಐರೋಪ್ಯರು ತಮ್ಮ ಅಕೃತ್ಯಕ್ಕೆ ತಾವೇ ತಲೆತಗ್ಗಿಸಬೇಕಾಯಿತು. ಪತ್ರಿಕೆಗಳು ನನ್ನನ್ನು ನಿರ್ದೋಷಿ ಎಂದುವು; ಕೇಡಿಗಳ ನಡತೆ ಖಂಡಿಸಿದುವು. ಹೀಗೆ, ಬಿಳಿಯರು ಕೊಟ್ಟ ಈ ಚಿತ್ರಹಿಂಸೆ ನನಗೆ — ನನ್ನ ಕಾರ್ಯಕ್ಕೆ — ಕೊನೆಗೆ ವರವಾಗಿಯೆ `ಪರಿಣಮಿಸಿತು. ದಕ್ಷಿಣ ಆಫ್ರಿಕೆಯೊಳಗಿನ ಹಿಂದೀಯರ ಗೌರವ ಹೆಚ್ಚಿತು. ನನ್ನ ಕಾರ್ಯ ಬಹಳ ಹಗುರವಾಯಿತು. ಈ ಅನುಭವ ಮುಂದಿನ ಸತ್ಯಾಗ್ರಹ ಪ್ರಯೋಗಕ್ಕೆ ನನ್ನನ್ನು ಅಣಿಮಾಡಿತು.

ಮೂರುನಾಲ್ಕು ದಿನಗಳಲ್ಲಿ ನಮ್ಮ ಮನೆಗೆ ಹೋದೆ. ಎಂದಿನಂತೆ ಇರಲು ನನಗೆ ಬಹಳ ಕಾಲ ಬೇಕಾಗಲಿಲ್ಲ.

# ೧೮. ನಾನೇ ನನ್ನ ಅಗಸ

ನನ್ನ ಸುಖಜೀವನವೇನೋ ಆರಂಭವಾಗಿ ಬಿಟ್ಟಿತ್ತು. ಆದರೆ ಅದು ಬಹಳ ದಿನ ನಡೆಯಲಿಲ್ಲ. ಮನೆಯನ್ನು ಬಹಳ ಆಸ್ಥೆಯಿಂದ ಸಜ್ಜುಗೊಳಿಸಿದ್ದರೂ ಅದು ನನ್ನ ಮನಸ್ಸಿಗೆ ಒಪ್ಪಿರಲಿಲ್ಲ. ಆದ್ದರಿಂದ ಸುಖಜೀವನವನ್ನು ಆರಂಭಿಸುವಷ್ಟರಲ್ಲಿ ವೆಚ್ಚವನ್ನೂ ಹಿಡಿತಕ್ಕೆ ತರತೊಡಗಿದೆ. ಅಗಸನಿಗೆ ಕೊಡುತಿದ್ದ ಹಣ ಬಹಳವಾಗಿತ್ತು. ಹಾಗಿದ್ದರೂ ಬಟ್ಟೆ ಹೊತ್ತಿಗೆ ಬರುತ್ತಿರಲಿಲ್ಲ. ಆದ್ದರಿಂದ ೩೦-೪೦ ಕೊರಳಪಟ್ಟಿ, ಅಂಗಿ, ಸಾಲದಾದುವು. ಕೊರಳಪಟ್ಟಿ ದಿನವೂ ಬದಲಿಸಬೇಕಾಗಿದ್ದಿತು. ಅಂಗಿ ದಿನ ಬಿಟ್ಟು ದಿನಕ್ಕಾದರೂ ಬದಲಿಸಬೇಕಾಗಿದ್ದಿತು. ಇದರಿಂದ ಬರುತಿದ್ದ ವೆಚ್ಚ ಇಮ್ಮಡಿ. ಇದು ಅನವಶ್ಯಕವೆಂದು ತೋರಿತು. ಆದ್ದರಿಂದ ಇದರ ಉಳಿತಾಯಕ್ಕಾಗಿ ನಾನೇ ಒಗೆಯುವ ಸಾಮುಗ್ರಿ ಸಜ್ಜುಗೊಳಿಸಿದೆ. ಅಗಸತನವನ್ನು ಕುರಿತ ಒಂದು ಪುಸ್ತಕ ತಂದೆ. ನಾನು ಆ ಕಲೆ ಕಲಿತುದಲ್ಲದೆ ನನ್ನ ಹೆಂಡತಿಗೂ ಕಲಿಸಿದೆ. ಇದರಿಂದ ನನ್ನ ಕೆಲಸ ಹೆಚ್ಚಾದುದೇನೊ ನಿಜ. ಆದರೆ ಈ ಹೊಸ ಉದ್ಯೋಗದಿಂದ ಒಂದು ಆನಂದವೂ ಉಂಟಾಯಿತು.

ನಾನೇ ಒಗೆದ ಮೊಟ್ಟಮೊದಲಿನ ಕೊರಳಪಟ್ಟಿಯನ್ನು ಎಂದಿಗೂ ಮರೆಯಲಾರೆ. ಬೇಕಾದುದಕ್ಕಿಂತ ಹೆಚ್ಚು ಗಂಜಿ ಅದಕ್ಕೆ ಹಾಕಿದ್ದೆ. ಇಸ್ತ್ರಿಯ ಒಲೆ ಸರಿಯಾಗಿ ಕಾದಿರಲಿಲ್ಲ. ಸುಟ್ಟು ಹೋಗುವುದೆಂಬ ಹೆದರಿಕೆಯಿಂದ ಪಟ್ಟಿಯನ್ನು ಚೆನ್ನಾಗಿ ಒತ್ತಿರಲಿಲ್ಲ. ಇದರ ಪರಿಣಾಮ ಏನಾಯಿತೆಂದರೆ ಕೊರಳಪಟ್ಟಿ ತಕ್ಕಷ್ಟು ಸೆಟೆದಿದ್ದರೂ ಗಂಜಿಹಿಟ್ಟು ಹೆಚ್ಚಾದುದರಿಂದ ಅಂಗಿಯ ಮೇಲೆ ಉದುರುತ್ತಲೇ ಇತ್ತು. ಇದನ್ನು ಕಟ್ಟಿಕೊಂಡು ನ್ಯಾಯಾಸ್ಥಾನಕ್ಕೆ ಹೋಗಿ ನಾನಾಗ ಜೊತೆಯ ವಕೀಲರ ಅಣಕಕ್ಕೆ ಗುರಿಯಾದೆ. ಆದರೆ ಅಪಹಾಸ್ಯ ತಡೆದುಕೊಳ್ಳುವ ಶಕ್ತಿ ನನ್ನಲ್ಲಿ ಆ ಕಾಲದಲ್ಲಿಯೂ ಇತ್ತು.

"ನನ್ನ ಪಟ್ಟಿ ನಾನೇ ಒಗೆಯುತ್ತಿರುವುದು ಇದೇ ಮೊದಲ ಸಲ. ಆದ್ದರಿಂದಲೇ ಗಂಜಿ ಹೆಚ್ಚಾಗಿ ಹಿಟ್ಟು ಉದುರುತ್ತಿರುವುದು. ಇದರಿಂದ ನನಗಾದ ತೊಂದರೆ ಏನು ? ಇದಲ್ಲದೆ ನಿಮಗೆಲ್ಲರಿಗೆ ಸ್ವಲ್ಪ ವಿನೋದಕ್ಕೂ ಆಸ್ಪದ ಕೊಟ್ಟಂತಾಯಿತಲ್ಲವೆ ?" ಎಂದೆ ನಾನು.

"ಆದರೆ ಇಲ್ಲಿ ಅಗಸರಿಗೇನೂ ಬರ ಬಂದಿಲ್ಲ" ಎಂದರು ಒಬ್ಬ ಗೆಳೆಯ.

ನಾನು "ಅಗಸನ ದರ ತೀರ ಹೆಚ್ಚು. ಒಂದು ಸಲ ಒಗೆಯುವ ಕೂಲಿ ಹೊಸಪಟ್ಟಿಯ ಬೆಲೆಯಷ್ಟೇ ಆಗುತ್ತದೆ. ಹೀಗಿದ್ದರೂ ಪರಾವಲಂಬನ ತಪ್ಪಿದ್ದಲ್ಲ. ಆದ್ದರಿಂದ ನನ್ನ ಬಟ್ಟೆ ನಾನೇ ಒಗೆಯುತಿದ್ದೇನೆ" ಎಂದೆ.

ಆದರೆ ಈ ಎಲ್ಲ ಗೆಳೆಯರಿಗೆ ಸ್ವಾವಲಂಬನ ತತ್ವವನ್ನು ಮನಗಾಣಿಸಿ ಕೊಡುವುದು ನನ್ನಿಂದ ಸಾಧ್ಯವಾಗಲಿಲ್ಲ. ಕ್ರಮೇಣ, ನನ್ನ ಕೆಲಸದ ಮಟ್ಟಿಗೆ ನಾನು ನಿಪುಣನಾದ ಅಗಸನಾದೆ. ಅಗಸನ ಕೆಲಸಕ್ಕಿಂತ ನನ್ನ ಕೆಲಸವೇನೂ ಕೆಡುತ್ತಿರಲಿಲ್ಲ. ಬಿರುಸಿನಲ್ಲಿ ಇಲ್ಲವೆ ಹೊಳಪಿನಲ್ಲಿ ಉಳಿದವರಿಗಿಂತ ನನ್ನ ಪಟ್ಟಿ ಕಡಿಮೆಯಾಗಿರಲಿಲ್ಲ.

## ೧೯. ಪಶ್ಚಾತ್ತಾಪದ ಒಂದು ಪ್ರಸಂಗ

ಡರ್ಬನ್ನಿನಲ್ಲಿಯೂ ಜೋಹಾನ್ಸ್‌ಬರ್ಗಿನಲ್ಲಿಯೂ ನಮ್ಮೊಂದಿಗೆ ಕೆಲವು ಸ್ನೇಹಿತರು ವಾಸಿಸುತಿದ್ದರು. ಕೆಲವು ಸಲ ನನ್ನ ಗುಮಾಸ್ತರೂ ಇರುತಿದ್ದರು. ಇವರೆಲ್ಲರೂ ನಮ್ಮ ಕುಟುಂಬದವರಾಗಿ ನಮ್ಮ ಮನೆಯಲ್ಲಿಯೆ ಇರುತಿದ್ದರು. ನೆಂಟರು ಆಗಂತುಕರು, ನಾಡವರು ಪರದೇಶೀಯರು, ಬಿಳಿಯರು ಮತ್ತು ಉಳಿದ ಬಣ್ಣದವರು, ಎಂಬ ತಾರತಮ್ಯ ನನ್ನಲ್ಲಿ ಖಂಡಿತವಾಗಿ ಇರಲಿಲ್ಲ. ಇದೇನೂ ನನ್ನ ಹೆಚ್ಚಿನ ಸದ್ಗುಣವಾಗಿರಲಿಲ್ಲ. ನನ್ನ ರಕ್ತದಲ್ಲಿ ಇದು ಅಷ್ಟು ಬೆರೆತಿತ್ತು. ಡರ್ಬನ್ನಿನಲ್ಲಿ ವಕೀಲತನ ಮಾಡುತಿದ್ದಾಗ ನನ್ನ ಎಷ್ಟೋ ಗುಮಾಸ್ತರು ನಮ್ಮ ಮನೆವಾರ್ತೆಯವರಾಗಿದ್ದರು. ಅವರಲ್ಲಿ ಒಬ್ಬ ಕಿರಿಸ್ತಾನರವ. ಅಸ್ಪೃಶ್ಯರೆಂದು ಎನ್ನಿಸಿಕೊಳ್ಳುವ ತಂದೆ ತಾಯಿಗಳ ಮಗ. ಮನೆಯೊಳಗಿನ ಎಲ್ಲ ಕೆಲಸ— ಕೋಣೆಯೊಳಗಿನ ಕಶ್ಮಲಪಾತ್ರೆ ತೊಳೆಯುವುದೂ ಕೂಡ— ಈ ದೊಡ್ಡ ಕುಟುಂಬಕ್ಕೆ ಸೇರಿದ ಎಲ್ಲ ಜನರೂ ಮಾಡುತಿದ್ದರು. ಆದರೆ ಈ ಕ್ರಿಸ್ತೀಯ ಗುಮಾಸ್ತ ಹೊಸಬ. ಆದ್ದರಿಂದ ಅವನ ಮಲಗುವ ಕೋಣೆ ಚೊಕ್ಕಟವಾಗಿಡುವ ಕೆಲಸ ನಾವೇ ಮಾಡಬೇಕಾಯಿತು. ನನ್ನ ಹೆಂಡತಿ ಕೆಲಸಕ್ಕೆ ಬೇಸರಿಯುವವಳಲ್ಲ ಎಲ್ಲರ ಕೆಲಸವನ್ನು ತಪ್ಪದೆ ಮಾಡುತಿದ್ದಳು. ಅಸ್ಪೃಶ್ಯರ ವಿಷಯದಲ್ಲಿ ಮಾತ್ರ

ಅವಳಿಗೆ ಅಸಹ್ಯ. ಪರಂಪರೆಯಿಂದ ಬಂದ ಈ ದೂಷಿತ ಭಾವನೆಯನ್ನು ಬಿಡಲು ಅವಳು ಶಕ್ತಳಾಗಿರಲಿಲ್ಲ. ಆಕೆ ಈ ಹೊಸಬನ ಕೋಣೆ ಚೊಕ್ಕಟ ವಾಗಿಡುತಿದ್ದುದು ಮನಸ್ಸಿಲ್ಲದ ಮನಸ್ಸಿನಿಂದ. ಒಮ್ಮೆ ಕೈಯಲ್ಲಿ ಕಶ್ಮಲ-ಪಾತ್ರೆಯನ್ನು ಹಿಡಿದುಕೊಂಡು ಅವನ ಅಟ್ಟದ ಮೆಟ್ಟಲು ಇಳಿಯುತ್ತ ಲಿದ್ದಳು. ಮೋರೆ ಹುಬ್ಬುಗಂಟಾಗಿದ್ದಿತು. ಇದನ್ನು ನನ್ನಿಂದ ತಾಳಿಕೊಳ್ಳು ವುದಾಗಲಿಲ್ಲ. ಹೆಂಡತಿಯ ವಿಷಯದಲ್ಲಿ ನಾನು ನಿಷ್ಠುರಪ್ರೇಮಿಯಾಗಿದ್ದೆ. ಆದ್ದರಿಂದ ಅವಳು ಈ ಕೆಲಸ ಇಷ್ಟು ಅಸಹನೆಯಿಂದ ಮಾಡುವುದು ನನಗೆ ಸರಿ ಎನಿಸಲಿಲ್ಲ. ನನ್ನ ವಿಚಾರವನ್ನು ಅವಳ ಮೇಲೆ ಹೇರಿ ಆಕೆ ಇಂತಹ ಕೆಲಸವನ್ನು ಸಂತೋಷದಿಂದ ಮಾಡುವಂತೆ ಮಾಡಬೇಕು ಎಂದು ನನಗೆ ತೋರಿತು. ಔತ್ಸುಕ್ಯವೂ ಪ್ರಸನ್ನತೆಯೂ ಜೊತೆಗೂಡಲಾರವು ಎಂಬುದನ್ನು ನಾನು ಸಿಟ್ಟಿನಲ್ಲಿ ಮರೆತುಬಿಟ್ಟು "ಈ ತರಹದ ಹುಡುಗಾಟಿಕೆ 'ನನ್ನ' ಮನೆಯಲ್ಲಿ ಸಲ್ಲದು" ಎಂದು ಆರ್ಭಟಿಸಿದೆ.

"ನಿಮ್ಮ ಮನೆ ನಿಮಗೇ ಇರಲಿ. ನಾನು ಹೊರಟುಹೋಗುತ್ತೇನೆ." ಆಕೆಯ ಉತ್ತರವೂ ಅಷ್ಟೇ ಚುರುಕಾಗಿ ಬಂತು. ನನ್ನಲ್ಲಿ ತಾಳ್ಮೆ ಉಳಿಯ ಲಿಲ್ಲ. ಆಕೆಯ ತೋಳು ಹಿಡಿದು ಬಾಗಿಲ ಹತ್ತಿರ ಎಳೆದೊಯ್ದೆ; ಮತ್ತು ಆಕೆಯನ್ನು ಹೊರದೂಡಲು ಬಾಗಿಲು ತೆರೆಯತೊಡಗಿದೆ. ಕಣ್ಣೀರು ಆಕೆಯ ಗಲ್ಲದ ಮೇಲೆ ಕೋಡಿವರಿದು ಹರಿಯುತ್ತಲಿತ್ತು. "ನಿಮಗೆ ನಾಚಿಕೆ ಇಲ್ಲವೆ? ತಿಳಿವಳಿಕೆ ಸ್ವಲ್ಪವೂ ಬೇಡವೆ? ನಾನು ಎಲ್ಲಿಗೆ ಹೋಗಲಿ? ಈ ಪರಸ್ಥಳದಲ್ಲಿ ನನ್ನನ್ನು ನೋಡಿಕೊಳ್ಳುವವರಾರು? ನಿಮ್ಮ ಒದೆ, ಪೆಟ್ಟು ತಿಂದುಕೊಂಡಿರಬೇಕೆಂದು ನಿಮ್ಮ ಇಚ್ಛೆ. ಏಕೆಂದರೆ ನಾನು ನಿಮ್ಮ ಹೆಂಡತಿ! ನಿಮ್ಮ ದಮ್ಮಯ್ಯ! ಸ್ವಲ್ಪ ಸುಮ್ಮನಿರಿ. ಬಾಗಿಲು ತೆರೆಯಬೇಡಿರಿ. ಇಂತಹ ಹುಚ್ಚಾಟ ಜನರಿಗೆ ತಿಳಿದರೆ ಏನು ಗತಿ!" ಎಂದು ಆಕೆ ಮೊರೆ ಇಟ್ಟಳು.

ನನ್ನ ಮೋರೆಯ ಮೇಲೋ ತೋರಿಕೆಗೆ ಮಾತ್ರ ಶೂರತನದ ಆಡಂಬರವಿತ್ತು. ಆದರೆ ನಿಜವಾಗಿಯೂ ನಾಚಿಕೆಯಿಂದ ಮೋರೆ ತಗ್ಗಿಸು ವಂತಾಗಿತ್ತು. ಆಕೆ ನನ್ನನ್ನು ಬಿಟ್ಟುಹೋಗುವುದು ಅಸಾಧ್ಯವಿದ್ದಂತೆಯೆ ನಾನು ಅವಳನ್ನು ಬಿಡುವುದೂ ಅಸಾಧ್ಯವೇ ಆಗಿತ್ತು. ನಮ್ಮ ನಮ್ಮಲ್ಲಿ

ಇಂತಹ ಕಾದಾಟ ಎಷ್ಟೋ ಸಲ ನಡೆದಿದೆ. ಆದರೆ ಕೊನೆಗಂಡದ್ದು ಮಾತ್ರ ಯಾವಾಗಲೂ ಶಾಂತಿಯಲ್ಲಿ. ಒಂದೊಂದು ಜಗಳವೂ ನಮ್ಮನ್ನು ಹೆಚ್ಚು ಹೆಚ್ಚು ಹತ್ತಿರ ತಂದಿದೆ. ಆಕೆ ಯಾವಾಗಲೂ ಎಣೆಯಿಲ್ಲದ ತಾಳ್ಮೆ ಯಿಂದ ನನ್ನನ್ನೇ ತಿದ್ದಿದ್ದಾಳೆ. ನಾನು ಈಗ ಆಕೆಯ ವಿಷಯದಲ್ಲಿ ಹಿಂದಿನಂತೆ ಕಾಮಾಂಧ ಪತಿಯೂ ಅಹಂಮನ್ಯ ಗುರುವೂ ಆಗಿಲ್ಲ. ನಾವಿಬ್ಬರೂ ಈಗ ಅನುಭವಿಕರಾದ ಗೆಳೆಯ ಗೆಳತಿಯರು. ಒಬ್ಬರಿಗೊಬ್ಬರು ಕಾಮ ಮೋಹಗಳ ವಸ್ತುವಲ್ಲ. ನಾನು ಜೇನೆ ಬಿದ್ದಾಗ ಯಾವಾಗಲೂ ಆಕೆ ಶ್ರದ್ಧೆಯಿಂದ ನನ್ನ ಆರೈಕೆ ಮಾಡಿದ್ದಾಳೆ. ನನ್ನಿಂದ ಯಾವ ಕೃತಜ್ಞತೆಯನ್ನೂ ಬಯಸದೆ ನನ್ನ ಬಾಳುವೆಯ ಎಲ್ಲ ಮಹತ್ವದ ಕಾರ್ಯಗಳಲ್ಲಿ ಆಕೆ ತನ್ನನ್ನೇ ಮರೆತು ನನ್ನನ್ನು ಹಿಂಬಾಲಿಸಿದ್ದಾಳೆ.

## ೨೦. ಬೋರ್ ಕಾಳಗದ ಅನುಭವಗಳು

ಈಗ ೧೮೯೭ ಮತ್ತು ೧೮೯೯ ರ ನಡುವಿನ ಎಷ್ಟೋ ಅನುಭವಗಳನ್ನು ಬದಿಗಿರಿಸಿ ಬೋರ್ ಕಾಳಗಕ್ಕೆ ಬರಬೇಕಾಗಿದೆ.

ಈ ಕದನ ಮೊದಲಾದಾಗ ನನ್ನ ವೈಯಕ್ತಿಕ ಸಹಾನುಭೂತಿ ಬೋರರ ಕಡೆಗೆ ಇತ್ತು. ಆದರೆ ಇಂತಹ ವಿಷಯದಲ್ಲಿ ಸ್ವಂತ ಅಭಿಪ್ರಾಯದಂತೆ ನಡೆಯಲು ನನಗೆ ಇನ್ನೂ ಅಧಿಕಾರ ಬಂದಿಲ್ಲವೆಂದು ಆಗ ನಾನು ನಂಬಿದ್ದೆ. ಈ ವಿಷಯದಲ್ಲಿ ನನ್ನೊಳಗೇ ಹೋರಾಟ ನಡೆದಿತ್ತು. ಅದನ್ನು 'ದಕ್ಷಿಣ ಆಫ್ರಿಕೆಯ ಸತ್ಯಾಗ್ರಹದ ಇತಿಹಾಸ' ದಲ್ಲಿ ಬಹಳ ವಿವರವಾಗಿ ಬರೆದಿದ್ದೇನೆ. ತಿಳಿದುಕೊಳ್ಳುವ ಲವಲವಿಕೆ ಉಳ್ಳವರು ಆ ಪುಸ್ತಕ ಓದಬೇಕು. ಇಲ್ಲಿ ಸಂಕ್ಷೇಪವಾಗಿ ಇಷ್ಟು ಹೇಳಿದರೆ ಸಾಕು :— ಈ ಕಾಳಗದಲ್ಲಿ ನಾನು ಬ್ರಿಟಿಷರ ಪರವಾಗುವಂತೆ ಮಾಡಿದ್ದು ಬ್ರಿಟಿಷ್ ಆಳಿಕೆಯಲ್ಲಿದ್ದ ನನ್ನ ನಂಬಿಗೆ. ಬ್ರಿಟಿಷ್ ನಾಗರಿಕನಿಗಿರುವ ಹಕ್ಕು ನನಗೂ ಬೇಕು. ಹಾಗಿದ್ದರೆ ಬ್ರಿಟಿಷ್ ಪ್ರಜೆಯಂತೆ ಸಾಮ್ರಾಜ್ಯರಕ್ಷಣೆಗೆ ನೆರವಾಗುವುದು ನನ್ನ ಕರ್ತವ್ಯ. ಹಿಂದುಸ್ಥಾನ ಬ್ರಿಟಿಷ್ ಸಾಮ್ರಾಜ್ಯದಲ್ಲಿಯೇ ಉಳಿಯಬೇಕು; ತನ್ನ ಬಂಧ ವಿಮೋಚನೆ ಸಾಮ್ರಾಜ್ಯದ ಮುಖಾಂತರವಾಗಿಯೇ ಸಾಧಿಸಿಕೊಳ್ಳಬೇಕು.

ಇದು ನನ್ನ ಆಗಿನ ಅಭಿಪ್ರಾಯ. ಇದಕ್ಕನುಸರಿಸಿ ಸಾಧ್ಯವಾದಷ್ಟು ಜನರನ್ನು ಒಟ್ಟುಗೂಡಿಸಿ ಗಾಯಾಳುಗಳ ಸೇವೆಗಾಗಿ ಒಂದು ದಳವನ್ನೇರ್ಪಡಿಸಿದೆ. ಆದರೆ ಸರಕಾರ ನಮ್ಮ ಈ ಸೇವೆ ಸ್ವೀಕರಿಸುವಂತೆ ಮಾಡಲು ಬಹಳ ಪ್ರಯಾಸ ಪಡಬೇಕಾಯಿತು.

ಹಿಂದೀಯರು ಮಹಾ ಹೇಡಿಗಳು; ಕಷ್ಟಗಳಿಗೆ ಹೆದರುವವರು; ಸ್ವಾರ್ಥವೇ ಅವರ ಇಷ್ಟದೇವತೆ; ಎಂದು ಇಂಗ್ಲಿಷ್ ಜನಸಾಮಾನ್ಯರು ತಿಳಿದಿದ್ದರು. ಆದ್ದರಿಂದ ಈ ಪ್ರಯತ್ನಕ್ಕೆ ನನ್ನ ಎಷ್ಟೋ ಇಂಗ್ಲಿಷ್ ಸ್ನೇಹಿತರು ತಣ್ಣೀರೆರಚಿದರು. ಆದರೆ ಡಾ. ಬೂತ್‌ರವರು ಮಾತ್ರ ಇದಕ್ಕೆ ಹೃತ್ಪೂರ್ವಕವಾಗಿ ಬೆಂಬಲಕೊಟ್ಟರು. ಇವರು ಭಾರತೀಯ ಚರ್ಚ್ ಮಿಶನ್ನಿಗೆ ಸೇರಿದವರು. ಶುಶ್ರೂಷೆಯ ಕೆಲಸವನ್ನು ಇವರು ನಮಗೆ ಚೆನ್ನಾಗಿ ಹೇಳಿಕೊಟ್ಟರು. ನಮ್ಮ ದೇಹದಾರ್ಢ್ಯ ಚೆನ್ನಾಗಿದೆಯೆಂಬ ಬಗೆಗೆ ವೈದ್ಯರಿಂದ ನಮಗೆ ಯೋಗ್ಯತಾಪತ್ರ ದೊರಕಿತು. ರಣಕ್ಷೇತ್ರದಲ್ಲಿ ಶುಶ್ರೂಷೆಗೆ ನಮಗೆ ಅವಕಾಶವೀಯಬೇಕೆಂದು ಸರಕಾರಕ್ಕೆ ಆಮೇಲೆ ಬಿನ್ನವಿಸಿಕೊಂಡೆವು.

ನಮ್ಮ ದಳದಲ್ಲಿ ೧೧೦೦ ಜನರಿದ್ದರು. ಇವರಲ್ಲಿ ಸುಮಾರು ೪೦ ಜನ ನಾಯಕರು. ಒಟ್ಟು ಜನರಲ್ಲಿ ಸುಮಾರು ೩೦೦ ಸ್ವತಂತ್ರ ಭಾರತೀಯರು. ಉಳಿದವರು ಕರಾರುಕೂಲಿಗಳು. ನಮ್ಮ ಜೊತೆಯಲ್ಲಿ ಡಾ. ಬೂತರೂ ಇದ್ದರು. ನಮ್ಮ ಶುಶ್ರೂಷಾದಳ ಚೆನ್ನಾಗಿ ಕೆಲಸಮಾಡಿತು. ಪ್ರತ್ಯಕ್ಷ ಯುದ್ಧಭೂಮಿಯಲ್ಲಿ ನಮ್ಮ ಕೆಲಸವಿರಲಿಲ್ಲ. ಇದಲ್ಲದೆ 'ರೆಡ್‌ಕ್ರಾಸಿ'ನ ಆಶ್ರಯವೂ ನಮಗಿತ್ತು. ಹೀಗಿದ್ದರೂ ಆಪತ್ಕಾಲದಲ್ಲಿ ಗುಂಡು ಬೀಳುತ್ತಿರುವ ಸ್ಥಳಕ್ಕೆ ಹೋಗಬೇಕೆಂದು ನಮಗೆ ಅಪ್ಪಣೆ ಕೊಡುತಿದ್ದರು. ಅಲ್ಲಿಗೆ ಹೋಗಕೂಡದೆಂಬುದು ನಾವು ಮಾಡಿಕೊಂಡ ನಿಯಮವಲ್ಲ. ನಾವು ಪ್ರತ್ಯಕ್ಷ ಕದನಭೂಮಿಯಲ್ಲಿರುವುದು ಸರಕಾರಕ್ಕೆ ಬೇಡವಾಗಿತ್ತು. ಆದರೆ ಬ್ರಿಟಿಷರಿಗೆ ಸ್ಪಿಯನ್‌ಕೋಪಿನಲ್ಲಿ ಸೋಲು ಬಂದ ಮೇಲೆ ಪರಿಸ್ಥಿತಿ ಬೇರೆಯಾಯಿತು. ಆಗ ಜನರಲ್ ಬುಲ್ಲರರು ನಮಗೆ 'ಅಪಾಯಕ್ಕೆ ತಲೆ ಕೊಡಲು ನೀವೇನೂ ಬಾಧ್ಯರಲ್ಲ. ಆದರೂ ಯುದ್ಧಭೂಮಿಯಲ್ಲಿ ಬಿದ್ದಿರುವ ಗಾಯಾಳುಗಳನ್ನು ತರುವ ಸಾಹಸ ಮಾಡಿದರೆ ಸರಕಾರಕ್ಕೆ ಬಹಳ ಉಪಕಾರ ಮಾಡಿದಂತಾಗುತ್ತದೆ' ಎಂದು ಹೇಳಿಕಳಿಸಿದರು. ಕಾಳಗದ

ಕಣಕ್ಕೆ ಹೋಗಲು ನಮಗೆ ಹೆದರಿಕೆ ಇರಲಿಲ್ಲ. ಆದ್ದರಿಂದ ಕಣಕ್ಕೆ ಹೋಗಿ ನಮ್ಮ ಕೆಲಸ ಮಾಡತೊಡಗಿದೆವು. ಆ ದಿನಗಳಲ್ಲಿ ನಾವು ಹೆಗಲಮೇಲೆ ಗಾಯಾಳಿನ ಚಟ್ಟ ಹೊತ್ತುಕೊಂಡು ದಿನಕ್ಕೆ ೨೦-೨೫ ಮೈಲು ನಡೆದು ದುಂಟು. ಸೇನಾಪತಿ ಉಡ್‌ಗೇಟ್‌ರಂತಹ ಗಾಯಾಳನ್ನು ಹೊರುವ ಸುಯೋಗವೂ ನಮಗೆ ಒದಗಿತ್ತು.

ನಮ್ಮ ದಳದ ಕೆಲಸ ಆರು ವಾರಗಳಿಗೆ ಮುಗಿಯಿತು. ಆಗ ನಮ್ಮ ಅಲ್ಪ ಸೇವೆಗೆ ವಿಶೇಷವಾದ ಶ್ಲಾಘನೆ ದೊರೆಯಿತು. ಭಾರತೀಯರ ಗೌರವ ಹೆಚ್ಚಿತು. ವೃತ್ತಪತ್ರಿಕೆಗಳಲ್ಲಿ 'ನಾವೂ ಸಾಮ್ರಾಜ್ಯದ ಸತ್ಪುತ್ರರು' ಎಂಬ ಪಲ್ಲವಿಯ ಪದ್ಯವೊಂದು ಪ್ರಕಟವಾಯಿತು. ಇದೊಂದು ಕೊಂಡಾಟದ ಪದ್ಯ.

ಸಂಕಟಕಾಲದಲ್ಲಿ ಮಾನವ ಸ್ವಭಾವ ಬಹಳ ಉನ್ನತವಾಗಿ ತೋರುತ್ತದೆ. ಈ ಬಗೆಗೆ ಇಲ್ಲಿ ಒಂದು ಸವಿ ನೆನಹನ್ನು ಬರೆಯದಿರಲಾರೆ. ನಾವು ಶಿವಲಿ ಪಾಳಯದ ಕಡೆಗೆ ಹೋಗುತ್ತಲಿದ್ದೆವು. ಲಾರ್ಡ್ ರಾಬರ್ಟರ ಮಕ್ಕಳಾದ ಲೆಫ್ಟಿನಂಟ್ ರಾಬರ್ಟ್ಸ್ ಅಲ್ಲಿ ಸತ್ತಿದ್ದರು. ಈ ಶವವನ್ನು ತರುವ ಸನ್ಮಾನ ನಮ್ಮ ದಳಕ್ಕೆ ಸಿಕ್ಕಿತ್ತು. ಅಂದು ಅತಿಶಯ ಸೆಕೆ. ಬಾಯಾರಿಕೆಯಿಂದ ಎಲ್ಲರ ಗಂಟಲೂ ಒಣಗಿಹೋಗಿತ್ತು. ದಾರಿಯಲ್ಲಿ ಒಂದು ಚಿಕ್ಕ ಝರಿ ಸಿಕ್ಕಿತು. ನಮಗೆಲ್ಲರಿಗೂ ಸಾಕಾಗುವಷ್ಟು ನೀರು ಅಲ್ಲಿತ್ತು. ಆದರೆ ಮೊದಲು ಯಾರು ಕುಡಿಯಬೇಕು? ನಾವು, ಬ್ರಿಟಿಷ್ ದಂಡಾಳುಗಳ ನಂತರ ಕುಡಿಯುವೆವೆಂದು ಹೇಳಿದೆವು. ಆದರೆ ಅವರು ಒಪ್ಪದೆ ನಮಗೇ ಒತ್ತಾಯ ಪಡಿಸಿದರು. ಹೀಗೆ ಒಬ್ಬರು ಇನ್ನೊಬ್ಬರನ್ನು ಮೊದಲು ಕಳಿಸಲು ಸ್ವಲ್ಪ ಹೊತ್ತಿನ ವರೆಗೆ ನಮ್ಮ ನಮ್ಮೊಳಗೆ ಒಂದು ಸರಸ ಮೇಲಾಟವೇ ನಡೆಯಿತು.

ಈ ಪ್ರಕರಣ ಮುಗಿಸುವ ಮೊದಲು ನಾನು ಒಂದು ಮಹತ್ವದ ಸಂಗತಿ ಹೇಳಬೇಕು. ಬೋರರು ಲೇಡಿಸ್ಮಿತ್ ಮುತ್ತಿದಾಗ ಅಲ್ಲಿ ಬ್ರಿಟಿಷರಲ್ಲದೆ ಅಲ್ಲೊಬ್ಬರು ಇಲ್ಲೊಬ್ಬರು ಹಿಂದೀಯರೂ ನೆಲಸಿದ್ದರು. ಇವರಲ್ಲಿ ಕೆಲವರು ಮಾತ್ರ ವ್ಯಾಪಾರಸ್ಥರು. ಉಳಿದವರೆಲ್ಲ ರೇಲ್ವೆಗಳಲ್ಲಿ ಕರಾರು ಕೂಲಿಕಾರರು; ಅಥವಾ ಐರೋಪ್ಯರಲ್ಲಿ ಊಳಿಗದವರು. ಪ್ರಭುಸಿಂಗ್

ಇವರಲ್ಲೊಬ್ಬ. ಲೇಡಿಸ್ಮಿತ್ಥಿನ ಅಧಿಕಾರಿ ಅಲ್ಲಿಯ ಪ್ರತಿ ಒಬ್ಬ ನಿವಾಸಿಗೂ ಬೇರೆ ಬೇರೆ ಕೆಲಸ ಹಂಚಿಕೊಟ್ಟ. ಈ 'ಕೂಲಿ' ಪ್ರಭುಸಿಂಗನ ಪಾಲಿಗೆ ಬಂದ ಕೆಲಸ ಬಹಳ ಅಪಾಯದ್ದು; ಬಹಳ ಹೊಣೆಯದು. ಲೇಡಿಸ್ಮಿತ್ಥಿನ ಹತ್ತಿರ ಒಂದು ದಿನ್ನೆಯ ಮೇಲೆ ಬೋರರು ತೋಪು ಇಟ್ಟಿದ್ದರು. ಇವುಗಳ ಹೊಡೆತಕ್ಕೆ ಎಷ್ಟೋ ಕಟ್ಟಡ ನೆಲಸಮವಾದುವು. ಸ್ವಲ್ಪ ಪ್ರಾಣಹಾನಿಯೂ ಆಯಿತು. ತೋಪಿನಿಂದ ಹೊರಟ ಗುಂಡು ಗುರಿಮುಟ್ಟಬೇಕಾದರೆ ಒಂದೆರಡು ನಿಮಿಷವಾದರೂ ಬೇಕು. ನಾಗರಿಕರಿಗೆ ಸ್ವಲ್ಪ ಮೊದಲು ತಿಳಿದರೂ ಸಾಕು; ಈ ಗುಂಡಿನಿಂದ ತಪ್ಪಿಸಿಕೊಳ್ಳಲು ಅವರು ಆಶ್ರಯ ಪಡೆಯಬಹುದಾಗಿದ್ದಿತು. ಈ ಪ್ರಭುಸಿಂಗ್ ಒಂದು ಗಿಡದ ಮೇಲೆ ಎತ್ತರದಲ್ಲಿ ಕುಳಿತು ಆ ದಿನ್ನೆಯ ಕಡೆಗೇ ನೆಟ್ಟ ನೋಟದಿಂದ ನೋಡುತ್ತ ಗುಂಡಿನ ಬೆಂಕಿ ಕಂಡಕೂಡಲೇ ಗಂಟೆ ಬಾರಿಸತೊಡಗಿದ. ಗಂಟೆ ಕೇಳಿಸಿದ ಕೂಡಲೇ ಲೇಡಿಸ್ಮಿತ್ಥಿನ ನಿವಾಸಿಗಳು ಆ ಭಯಂಕರವಾದ ತೋಪಿನ ಗುಂಡಿನಿಂದ ತಮ್ಮ ಪ್ರಾಣ ಉಳಿಸಿಕೊಳ್ಳುವುದಕ್ಕಾಗಿ ಆಶ್ರಯಸ್ಥಾನಕ್ಕೆ ಓಡುತಿದ್ದರು.

ಈತನ ಸಾಹಸದ ಕತೆ ಹಿಂದುಸ್ಥಾನದ ಆಗಿನ ವೈಸ್‌ರಾಯ್ ಲಾರ್ಡ್ ಕರ್ಜನ್ನನ ಕಿವಿಯ ವರೆಗೆ ಹೋಯಿತು. ಆತ ಈ ಪ್ರಭುಸಿಂಗನಿಗೆ ಒಂದು ಕಾಶ್ಮೀರ್ ನಿಲುವಂಗಿಯ ಉಡುಗೊರೆ ಕಳಿಸಿದ.

## ೨೧. ಹಿಂದುಸ್ಥಾನಕ್ಕೆ ಬಂದು ಹೋದದ್ದು

ಯುದ್ಧಭೂಮಿಯಿಂದ ತಿರಿಗಿ ಬಂದಮೇಲೆ, ನನ್ನ ಕೆಲಸ ಹೆಚ್ಚಾಗಿರುವುದು ಹಿಂದುಸ್ಥಾನದಲ್ಲಿ; ದಕ್ಷಿಣ ಆಫ್ರಿಕೆಯಲ್ಲಲ್ಲ ಎಂದು ತೋರಿತು. ಆದ್ದರಿಂದ ನನಗೆ ಹೋಗಲು ಅಪ್ಪಣೆ ಕೊಡಬೇಕೆಂದು ಸಂಗಡಿಗರನ್ನು ಕೇಳಿದೆ. ಅಲ್ಲಿಯ ಹಿಂದೀಯರಿಗೆ ಅವಶ್ಯವೆನಿಸಿದರೆ ಒಂದು ವರ್ಷದಲ್ಲಿ ತಿರಿಗಿ ಬರಬೇಕೆಂಬ ಕರಾರಿನಿಂದ ನನ್ನನ್ನು ಅವರು ಬಿಡುಗಡೆ ಮಾಡಿದರು. ನನಗಾಗಿ ಆಗ ಬೀಳ್ಕೊಳ್ಳುವ ಸಮಾರಂಭ ಏರ್ಪಡಿಸಿದರು. ಅದು ಹೃದಯಸ್ಪರ್ಶಿಯಾದ ದೃಶ್ಯ. ನನಗೆ ಬಂದ ಕಾಣಿಕೆಗಳಲ್ಲಿ ಬೆಳ್ಳಿ ಬಂಗಾರದ ಒಡವೆ ಇದ್ದುವು; ವಜ್ರದವು ಕೂಡ ಇದ್ದುವು. ಈ ಎಲ್ಲಾ ಉಡುಗೊರೆ ನನ್ನ

ಹೃದಯದಲ್ಲಿ ಕೃತಜ್ಞತಾಭಾವವನ್ನು ತುಂಬಿದುವು. ಜೊತೆಗೆ ಧರ್ಮ-ದರ್ಶಿತ್ವದ ಪ್ರತ್ಯಕ್ಷ ಪಾಠವನ್ನೂ ಕಲಿಸಿದುವು. ಆ ಕಾಣಿಕೆಗಳ ಯೋಚನೆಯಿಂದ ನನಗೆ ಆ ರಾತ್ರಿ ನಿದ್ದೆಯೆ ಬರಲಿಲ್ಲ. ಕೊನೆಗೆ, ಈ ಎಲ್ಲ ಕಾಣಿಕೆಯನ್ನು ಅಲ್ಲಿಯ ಹಿಂದೀಯರ ಸೇವೆಗಾಗಿ ತಿರಿಗಿ ಕೊಡುವುದೆಂದು ನಿಶ್ಚಯ ಮಾಡಿಕೊಂಡೆ. ಈ ನಿರ್ಣಯದಿಂದ ನನ್ನ ಹೆಂಡತಿಯು ಹೊಟ್ಟೆ ಉರಿಯದಿರಲಿಲ್ಲ. ಆದರೆ ಹಾಗೆ ಮಾಡಿದ್ದು ಯೋಗ್ಯವಾಯಿತೆಂದು ಆಕೆಗೆ ಎಷ್ಟೋ ವರುಷಗಳ ಮೇಲೆ ಮನವರಿಕೆಯಾಯಿತು. ಸಾರ್ವಜನಿಕ ಕೆಲಸಗಾರ ಎಂದಿಗೂ ಕಾಣಿಕೆ ಪಡೆಯಕೂಡದೆಂಬ ತಿಳಿವು ಅಂದಿನಿಂದ ನನ್ನಲ್ಲಿ ದೃಢವಾಗುತ್ತ ನಡೆಯಿತು.

ನಾನು ಹಿಂದುಸ್ತಾನಕ್ಕೆ ಹಿಂದಿರುಗಿದ ವರುಷ ಕಾಂಗ್ರೆಸ್ ಕೂಡಿದ್ದು ಕಲಕತ್ತೆಯಲ್ಲಿ. ಅಲ್ಲಿ ಸೇವೆ ಸಲ್ಲಿಸಲು ನನಗೆ ತಕ್ಕಷ್ಟು ಅನುವು ದೊರೆಯಿತು. ಸ್ವಯಂಸೇವಕರಿಗೆ ಗುಡಿಸುವ ಮತ್ತು ಕಕ್ಕಸು ಬಳಿಯುವ ಸರಿಯಾದ ಕ್ರಮ ಹೇಳಿಕೊಟ್ಟೆ. ಕಾರ್ಯದರ್ಶಿಗಳಲ್ಲೊಬ್ಬರಾಗಿದ್ದ ಶ್ರೀ. ಘೋಷಾಲರಿಗೆ ಗುಮಾಸ್ತನಾಗಿಯೂ ಸಹಾಯಕನಾಗಿಯೂ ಕೆಲಸ ಮಾಡುವ ಸುಯೋಗ ನನಗೆ ದೊರೆಯಿತು. ದಕ್ಷಿಣ ಆಫ್ರಿಕೆಯ ವಿಶಿಷ್ಟ ಪರಿಸ್ಥಿತಿಯನ್ನು ಕುರಿತ ಒಂದು ಗೊತ್ತುವಳಿಯನ್ನು ಮಹಾಸಭೆ (ಕಾಂಗ್ರೆಸ್) ಯಲ್ಲಿ ಮಂಡಿಸುವ ಗೌರವವೂ ದೊರೆಯಿತು. ಈ ವಿಷಯದಲ್ಲಿ ಶ್ರೀ. ಗೋಖಲೆಯವರಿಂದ ಬಹಳ ಉಪಕಾರವಾಯಿತು. ನಾನು ಹಿಂದುಸ್ಥಾನದಲ್ಲಿ ಕಾಲಿಟ್ಟಂದಿನಿಂದ ಅವರು ನನ್ನನ್ನು ತನ್ನ ತಮ್ಮನಂತೆ ನಡೆಸಿಕೊಂಡರು. ನನ್ನ ಚಟುವಟಿಕೆಗಳಲ್ಲಿ ಅವರ ಆಸ್ಥೆ ಇದ್ದೇ ಇತ್ತು. ನನಗೆ ಯಾರ ಪರಿಚಯ ಅಗತ್ಯವೆಂದು ಅವರಿಗೆ ತೋರಿತೋ ಅವರೆಲ್ಲರನ್ನೂ ನನಗೆ ಪರಿಚಯ ಮಾಡಿಕೊಟ್ಟರು. ಅವರು ಕೆಲಸ ಮಾಡುವುದನ್ನು ನೋಡುವುದರಿಂದಲೇ ನನಗೆ ಶಿಕ್ಷಣ ಆನಂದ ಎರಡೂ ದೊರೆತವು. ಯಾವ ಕೆಲಸ ಕೈಕೊಂಡರೂ ದೇಶ ಕಲ್ಯಾಣವೇ ಅವರ ಗುರಿ. ನಾನು ಮುಂಬಯಿಯಲ್ಲಿ ನೆಲೆನಿಲ್ಲಬೇಕು, ಅಲ್ಲಿ ವಕೀಲತನದ ವ್ಯವಸಾಯ ಮಾಡಬೇಕು, ಸಾರ್ವಜನಿಕ ಕೆಲಸದಲ್ಲಿ—ಎಂದರೆ ಕಾಂಗ್ರೆಸ್ ಕೆಲಸದಲ್ಲಿ—ತನಗೆ ನೆರವಾಗಬೇಕು, ಎಂಬ ಹೆಬ್ಬಯಕೆ ಅವರದು. ಆ ಸೂಚನೆಯೇನೊ ನನಗೆ ಒಗ್ಗಿತು. ಆದರೆ ಆ ವೃತ್ತಿಯಲ್ಲಿ

ಜಯಶೀಲನಾಗುವೆನೆಂಬ ಧೈರ್ಯ ಮಾತ್ರ ನನಗಿರಲಿಲ್ಲ. ಕೊನೆಗೆ ರಾಜಕೋಟೆಯಲ್ಲಿ ನೆಲಸಿದೆ. ಅಲ್ಲಿ ಒಳ್ಳೇ ಪ್ರಗತಿ ಹೊಂದುತ್ತಿರುವಷ್ಟರಲ್ಲಿ ನಾನು ಮುಂಬಯಿಯಲ್ಲಿ ನೆಲಸಬೇಕೆಂದು ಶ್ರೀ. ಕೇವಲರಾಮ ದವೆಯವರು ಒತ್ತಾಯಪಡಿಸಿದರು. ಇವರು ನನ್ನ ಸ್ನೇಹಿತರು, ಹಿತಚಿಂತಕರು. ನಾನು ಇಂಗ್ಲಂಡಿಗೆ ಹೋಗಲು ಇವರೇ ಮುಖ್ಯ ಕಾರಣರು. ಇಲ್ಲಿಯೂ ನನ್ನ ಉದ್ಯೋಗ ನಿರೀಕ್ಷೆಗಿಂತ ಚೆನ್ನಾಗಿ ಬೆಳೆಯಿತು. ದಕ್ಷಿಣ ಆಫ್ರಿಕೆಯ ನನ್ನ ಕಕ್ಷಿಗಾರರು ಇಲ್ಲಿಯೂ ನನಗೆ ಕೆಲಸ ಕೊಟ್ಟರು. ಚರಿತಾರ್ಥಕ್ಕೆ ಸಾಕಾಗುವಷ್ಟು ಇದರಿಂದ ದೊರೆಯುತಿತ್ತು. ಇಲ್ಲಿ ಬೇರುಬಿಡುತ್ತಿರುವಷ್ಟರಲ್ಲಿ ಕೂಡಲೇ ದಕ್ಷಿಣ ಆಫ್ರಿಕೆಗೆ ಹೊರಡಬೇಕೆಂದು ತಂತಿ ಬಂತು. ವಚನಕ್ಕೆ ಸರಿಯಾಗಿ ಹೊರಟುಬಿಟ್ಟೆ.

ಆಗ ದಕ್ಷಿಣ ಆಫ್ರಿಕೆಯಲ್ಲಿ ಕಂಡುಬಂದ ರಾಜಕೀಯ ಪರಿಸ್ಥಿತಿಯ ವಿವರ ಇಲ್ಲಿ ಹೇಳಲಾರೆ. ಅದು ಅತಿ ವಿಷಾದಕರ ಘಟನೆ. ಯುದ್ಧವೂ, ಯುದ್ಧದ ಜೊತೆಗೆ ಹಿಂದೀಯರು ಮಾಡಿದ ಸಹಾಯವೂ ಮರೆತು ಹೋಯಿತು. ಅಲ್ಲಿ ನೆಲಸಿದ ಹಿಂದೀಯರ ಪಾಡು ಇನ್ನೂ ಕೆಟ್ಟಿತು ಅವರ ಪಾಲಿಗೆ ಹೊಸ ಹೊಸ ಸಂಕಷ್ಟಗಳನ್ನು ಒಡ್ಡಲಾಯಿತು. ಆಗ ನನಗೆ "ದಕ್ಷಿಣ ಆಫ್ರಿಕೇಯ ನನ್ನ ಬಾಂಧವರ ಸೇವೆ ಮಾಡುವುದಿದ್ದರೆ ನಾನು ಅಲ್ಲಿ ಬಹಳ ದೀರ್ಘ ಅವಧಿಯ ವರೆಗೆ, ಅನಿಶ್ಚಿತ ಅವಧಿಯ ವರೆಗೆ ನಿಲ್ಲಬೇಕು" ಎಂದು ತೋರಿತು. ಆದ್ದರಿಂದ ನನ್ನ ಉದ್ಯೋಗವನ್ನು ಜೋಹಾನ್ಸಬರ್ಗಿನಲ್ಲಿ ಆರಂಭಿಸುವುದೆಂದು ನಿಶ್ಚಯಿಸಿದೆ. ಅಲ್ಲಿ, ವಕೀಲರು ಇರುವ ಭಾಗದಲ್ಲಿ ಮನೆ ದೊರಕಿಸುವುದು ಸ್ವಲ್ಪ ಕಷ್ಟವಾಯಿತು.

ಹಿಂದೀ ಜನರ ಏಳಿಗೆಗೆ ಮೀಸಲಾಗಿರಬೇಕೆಂಬ ನನ್ನ ಸಂಕಲ್ಪ ದೃಢವಾಗುತ್ತ ನಡೆದಂತೆ ಗೀತೆಯ ಹೊಸ ಅಧ್ಯಯನದಿಂದ ನನ್ನ ಮನಸ್ಸೂ ಹೆಚ್ಚು ಹೆಚ್ಚು ಅಂತರ್ಮುಖಿಯಾಯಿತು.

ಈ ಸಲವೂ ನಾನು ಗೀತೆಯನ್ನೋದಿದುದು ಕೆಲವು ಜನ ಬ್ರಹ್ಮ ಸಮಾಜದವರ ಜೊತೆಗೆ. ಈ ಓದಿನಿಂದ ಮೊದಲಿಗಿಂತ ಚೆನ್ನಾಗಿ ಅರ್ಥ ಬೋಧೆಯಾಯಿತು. ಶ್ಲೋಕಗಳನ್ನು ಉರುಹಾಕುವ ಯತ್ನವೂ ನಡೆಯಿತು. ಹೀಗೆ ಹದಿಮೂರಕ್ಕೆ ಕಡಿಮೆ ಇಲ್ಲದಷ್ಟು ಅಧ್ಯಾಯ ಪಾಠಮಾಡಿದ್ದು ನನಗೆ

ನೆನಪಿದೆ. ಅಂದಿನಿಂದ ನನಗೆ ಗೀತೆ ಆಧಾರಕೋಶವಾಯಿತು; ನನ್ನ ಚರ್ಯೆಗೆ ಅಮೋಘವಾದ ಮಾರ್ಗದರ್ಶಿಯಾಯಿತು. 'ಅಪರಿಗ್ರಹ' (ಸಂಗ್ರಹ ಮಾಡದಿರುವುದು), 'ಸಮಭಾವ' (ಸಮಾನತ್ವ), ಮುಂತಾದ ಶಬ್ದಗಳು ನನ್ನ ಮನಸ್ಸನ್ನು ಸೆಳೆದುವು. ನನ್ನದು ತನ್ನದು ಎಂಬುದನ್ನು ಬಿಡುವುದು ಹೇಗೆ? ಸಮಭಾವವನ್ನು ಬೆಳೆಸಿಕೊಳ್ಳುವುದೂ ಉಳಿಸಿ ಕೊಳ್ಳುವುದೂ ಹೇಗೆ? ಆಗ ನೇರವಾದ ಉತ್ತರ ಬಂತು:— ನನ್ನ ದೆನ್ನುವ ಎಲ್ಲವನ್ನೂ ಬಿಟ್ಟಹೊರತು ದೇವರನ್ನು ಹಿಂಬಾಲಿಸುವುದು ಸಾಧ್ಯವಿಲ್ಲ ಎಂದು. ಅಪರಿಗ್ರಹ ಮತ್ತು ಸಮಭಾವವೆಂದರೆ ಹೃದಯ ಪರಿ ವರ್ತನೆ, ದೃಷ್ಟಿಯ ಬದಲಾವಣೆ, ಎಂದು ಸೂರ್ಯಪ್ರಕಾಶದಷ್ಟು ಸ್ಪಷ್ಟ ವಾಗಿ ತೋರಿತು. ನನ್ನ ಜೀವವಿಮೆ ರದ್ದುಗೊಳಿಸಬೇಕೆಂದು ಮುಂಬಯಿಯ ಸ್ನೇಹಿತರಿಗೆ ಬರೆದೆ. ನನ್ನ ಅಣ್ಣನಿಗೂ 'ಈ ಕ್ಷಣದ ವರೆಗೆ ಉಳಿಸಿದ ಎಲ್ಲ ವನ್ನೂ ನಿಮಗೆ ಒಪ್ಪಿಸಿದ್ದೇನೆ. ಇನ್ನು ಮುಂದೆ ಮಾತ್ರ ನನ್ನಿಂದ ನೀವು ಏನನ್ನೂ ಅಪೇಕ್ಷಿಸಬಾರದು. ಮುಂದಿನ ಅಲ್ಪ ಸ್ವಲ್ಪ ಉಳಿಕೆ ಇಲ್ಲಿಯ ಭಾರತೀಯರ ಕ್ಷೇಮಕ್ಕಾಗಿ ವಿನಿಯೋಗಿಸಲಾಗಿ ಇಡಬೇಕೆಂದಿದ್ದೇನೆ' ಎಂದು ತಿಳಿಸಿದೆ.

ಇದೇ ಸುಮಾರಿಗೆ— ೧೯೦೪ರಲ್ಲಿ—'ಇಂಡಿಯನ್ ಒಪೀನಿಯನ್' ಪತ್ರಿಕೆಯ ಸಂಪಾದಕನಾದೆ. 'ಇಂಡಿಯನ್ ಒಪೀನಿಯನ್' ಒಂದು ವಾರ ಪತ್ರಿಕೆ. ದಕ್ಷಿಣ ಆಫ್ರಿಕೆಯ ಭಾರತೀಯರ ಕಷ್ಟನಷ್ಟಗಳನ್ನು ಚರ್ಚಿಸು ವುದೇ ಈ ಪತ್ರಿಕೆಯ ಧ್ಯೇಯ. ನಾನು ದುಡ್ಡಿನ ಸಹಾಯ ಮಾಡಿದ ಹೊರತು ಆ ಪತ್ರಿಕೆ ಚೆನ್ನಾಗಿ ನಡೆಯಲಾರದೆಂದು ನನಗೆ ಬೇಗನೆ ಕಂಡುಬಂತು. ಆದ್ದರಿಂದ ಅದಕ್ಕಾಗಿ ನನ್ನ ಉಳಿತಾಯ ವೆಚ್ಚಮಾಡುತ್ತಲೇ ಇದ್ದೆ. ಕೊನೆಗೆ ನನ್ನಲ್ಲಿ ಬಿಡಿಕಾಸು ಕೂಡ ಉಳಿಯದಂತಹ ಸ್ಥಿತಿ ಬಂತು. ಇಂದಿನ 'ಯಂಗ್ ಇಂಡಿಯ' ಮತ್ತು 'ನವಜೀವನ' ಪತ್ರಿಕೆಗಳು ಹೇಗೋ ಹಾಗೆ ಅಂದು 'ಇಂಡಿಯನ್ ಒಪೀನಿಯನ್' ನನ್ನ ಬಾಳುವೆಯ ಕನ್ನಡಿಯಾಗಿತ್ತು. ಈ ಬರಹಗಳಲ್ಲಿ ಖಂಡಿತವಾಗಿಯೂ ಪೂರ್ಣ ಪೂರ್ವಾಲೋಚನೆ ಇಲ್ಲದ ಅತಿಶಯೋಕ್ತಿಯ ಅಥವಾ ಮತ್ಸರದ ಒಂದು ಶಬ್ದವೂ ಇರಲಿಲ್ಲ. ಈ ಪತ್ರಿಕೆ ನನಗೆ ಆತ್ಮಸಂಯಮನದ ಸಾಧನವಾಯಿತು. ಅದರ ಶೈಲಿಯು,

ಟೀಕಾಕಾರರ ಲೆಕ್ಕಣಿಕೆಗೆ ನಿಗ್ರಹವನ್ನು ಕಲಿಸಿತು. ನಾನು ಆರೋಗ್ಯ ಹಾಗು ಪಥ್ಯಕ್ಕೆ ಸಂಬಂಧಪಟ್ಟ ಲೇಖಮಾಲೆ ಬರೆದುದು ಇದೇ ಪತ್ರಿಕೆಯಲ್ಲಿ. ಮುಂದೆ ಈ ಲೇಖಮಾಲೆ ಪುಸ್ತಕವಾಗಿ ಪ್ರಕಟವಾಯಿತು. ಇದರ ಇಂಗ್ಲಿಷ್ ಭಾಷಾಂತರ 'ಗೈಡ್ ಟು ಹೆಲ್ತ್' ಎಂಬ ಹೆಸರಿನಿಂದ ಪ್ರಚಾರವಾಯಿತು. ಪೂರ್ವ ಪಶ್ಚಿಮದ ಅನೇಕ ಓದುಗರ ಬದುಕಿನ ಮೇಲೆ ಈ ಪುಸ್ತಕದಿಂದ ವಿಶೇಷ ಪರಿಣಾಮವಾದಂತೆ ತೋರುತ್ತದೆ.

## ೨೨. ಒಂದು ಪುಸ್ತಕದ ಇಂದ್ರಜಾಲ

ನನ್ನ ಜೀವನದ ಮಾರ್ಪಾಡಿಗೆ ಬಹಳವಾಗಿ ಕಾರಣವಾದ ಪುಸ್ತಕ ಎಷ್ಟೋ ಇವೆ. ಆದರೆ ರಸ್ಕಿನ್ನನ 'ಅನ್ ಟು ದಿಸ್ ಲಾಸ್ಟ್'ನಷ್ಟು ಪ್ರಭಾವ ಬೀರಿದ ಪುಸ್ತಕ ಇನ್ನೊಂದಿಲ್ಲ. ೧೯೦೪ರಲ್ಲಿ 'ಇಂಡಿಯನ್ ಒಪೀನಿಯನ್' ಪತ್ರಿಕೆಯ ಕೆಲಸಕ್ಕಾಗಿ ನಾನು ಡರ್ಬನ್ನಿಗೆ ಹೋಗಬೇಕಾಯಿತು. ನನ್ನ ಸ್ನೇಹಿತರಾದ ಶ್ರೀ. ಆಲ್ಬರ್ಟ್ ವೆಸ್ಟರು ನನ್ನ ಬಿನ್ನಹಕ್ಕೆ ತಕ್ಷಣವೇ ಮಾನ್ಯತೆ ಕೊಟ್ಟು 'ಇಂಡಿಯನ್ ಒಪೀನಿಯನ್' ಪತ್ರಿಕೆಯ ಸ್ಥಿತಿಗತಿ ಹೇಗಿದೆಯೆಂದು ತಿಳಿದುಕೊಳ್ಳಲು ಕೂಡಲೇ ಡರ್ಬನ್ನಿಗೆ ಹೋದರು. ಇವರು ಇಂಗ್ಲಿಷ್ ಜನ. ಮುದ್ರಣವೇ ಇವರ ಕಸುಬು. ತಮ್ಮ ಉದ್ಯೋಗದಲ್ಲಿ ಚೆನ್ನಾಗಿ ನುರಿತವರು. ಪತ್ರಿಕೆಯ ಆರ್ಥಿಕಸ್ಥಿತಿ ಚೆನ್ನಾಗಿಲ್ಲವೆಂದು ಇವರು ಅಲ್ಲಿಂದ ತಿಳಿಸಿದ್ದರು.

ನಾನು ಡರ್ಬನ್ನಿಗೆ ಹೊರಟು ನಿಲ್ದಾಣಕ್ಕೆ ತಲುಪುವಷ್ಟರಲ್ಲಿ ನನ್ನ ನಿಕಟ ಪರಿಚಿತರಾದ ಶ್ರೀ. ಪೋಲಕರು ನಾನಿದ್ದಲ್ಲಿಗೆ ಬಂದರು. "ಇದು ನಿಮಗೆ ಮೆಚ್ಚಿಕೆಯಾಗಬಹುದು" ಎಂದು ಹಾದಿಯಲ್ಲಿ ಓದುವುದಕ್ಕಾಗಿ 'ಅನ್ ಟು ದಿಸ್ ಲಾಸ್ಟ್' ಎಂಬ ಪುಸ್ತಕ ಕೈಯಲ್ಲಿಟ್ಟರು.

ಓದು ಆರಂಭಿಸಿದ ಮೇಲೆ ಅದನ್ನು ಕೆಳಗಿಡುವುದೇ ಅಸಾಧ್ಯವಾಯಿತು. ನನ್ನ ಮನಸ್ಸು ಆ ಪುಸ್ತಕಕ್ಕೆ ಮಾರುಹೋಯಿತು. ಬಂಡಿ ಡರ್ಬನ್ ಸೇರಿದ್ದು ಸಂಜೆಗೆ. ಆ ಇರುಳು ನನಗೆ ನಿದ್ದೆಯೆ ಬರಲಿಲ್ಲ. ನಾನು ಓದಿದ ರಸ್ಕಿನ್ನನ ಮೊದಲ ಪುಸ್ತಕ ಇದೇ. ನನ್ನ ಜೀವನದಲ್ಲಿ ಕಾರ್ಯತಃ ಪರಿವರ್ತನೆಗೆ ಆರಂಭವಾಗಲು ಈ ಪುಸ್ತಕವೇ ಕಾರಣವಾಯಿತು. ನನ್ನ ಮನ

ದೊಳಗಿನ ಆಳವಾದ ಅನೇಕ ಭಾವಗಳನ್ನು ಇದು ಪ್ರತಿಬಿಂಬಿಸುವಂತೆ ತೋರಿತು. ಆದ್ದರಿಂದ ಇದರ ಸಿದ್ಧಾಂತದಂತೆ ನನ್ನ ಬದುಕನ್ನು ಮಾರ್ಪ-ಡಿಸಬೇಕೆಂದು ದೃಢ ಸಂಕಲ್ಪ ಮಾಡಿದೆ. ನಾನು ತಿಳಿದುಕೊಂಡ ಈ ಸಿದ್ಧಾಂತ ಗಳು ಇಂತಿವೆ :—

೧. ಎಲ್ಲರ ಕಲ್ಯಾಣವೇ ತನ್ನ ಕಲ್ಯಾಣ.

೨. ವಕೀಲನ ಕೆಲಸಕ್ಕೂ ಕೆಲಸಿಗನ ಕೆಲಸಕ್ಕೂ ಇರುವ ಬೆಲೆ ಒಂದೇ. ಏಕೆಂದರೆ ಉದ್ಯೋಗವಿರುವುದು ಚರಿತಾರ್ಥಕ್ಕಾಗಿ ಮಾತ್ರ. ಆದ್ದರಿಂದ ತಮ್ಮ ಬದುಕನ್ನು ಯಾವುದೇ ಕಸುಬಿನಿಂದ ಸಾಗಿಸಲು ಪ್ರತಿ ಒಬ್ಬರಿಗೂ ಅಧಿಕಾರವಿದೆ.

೩. ಶ್ರಮಜೀವನವೇ—ಎಂದರೆ ಗದ್ದೆ ಉಳುವವರ ಮತ್ತು ಕೈಗಾರಿಕೆ ಯವರ ಜೀವನವೇ—ಯೋಗ್ಯ ಜೀವನ.

ಈ ಮೂರರಲ್ಲಿ ಮೊದಲಿನದು ನನಗೆ ಗೊತ್ತಿತ್ತು.

ಎರಡನೆಯದು ಅಸ್ಪಷ್ಟವಾಗಿ ತಿಳಿದಿತ್ತು.

ಮೂರನೆಯದರ ವಿಷಯದಲ್ಲಿ ಈ ಮೊದಲು ಏನೂ ತೋಚಿರಲಿಲ್ಲ. ಮೊದಲನೆಯದರಲ್ಲಿ ಎರಡು ಮತ್ತು ಮೂರನೆಯದು ಅಡಕವಾಗಿವೆಯೆಂದು 'ಅನ್ ಟು ದಿಸ್ ಲಾಸ್ಟ್' ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿ ತೋರಿಸಿ ಕೊಟ್ಟಿತು. ಈ ತತ್ವಗಳನ್ನು ಆಚರಣೆಗೆ ತರಲು ಅಣಿಯಾಗಿ ನಸುಕಿ ನಲ್ಲಿಯೆ ಎದ್ದೆ.

## ೨೩. ಫೀನಿಕ್ಸ್ ಆಶ್ರಮ

ನನ್ನ ಜೀವನವನ್ನು ಮಾರ್ಪಡಿಸಬೇಕೆಂಬ ನಿಶ್ಚಯದ ಮೊದಲ ಹೆಜ್ಜೆಯೆಂದರೆ 'ಇಂಡಿಯನ್ ಒಪೀನಿಯನ್' ಪತ್ರಿಕೆ ಊರಿನಿಂದ ಸ್ವಲ್ಪದೂರ ವಿರುವ ಒಂದು ಸ್ಥಳಕ್ಕೆ ಸಾಗಿಸಬೇಕು, ಅಲ್ಲಿ ಪ್ರತಿ ಒಬ್ಬರೂ ಗೇಯಲು ಅನುಕೂಲವಿರಬೇಕು, ಬಿಡುವಿನ ವೇಳೆಯಲ್ಲಿ ಎಲ್ಲರೂ ಮುದ್ರಣಾಲಯದ ಕೆಲಸದಲ್ಲಿ ತೊಡಗಬೇಕು, ಎಲ್ಲರಿಗೂ ಒಂದೇ ಪ್ರಮಾಣದ ಸಂಬಳ

ದೊರೆಯಬೇಕು, ಎಂಬುದು. ಶ್ರೀ. ವೆಸ್ಟರು ನನ್ನ ಈ ಸೂಚನೆಗೆ ಒಪ್ಪಿದರು. ಪ್ರತಿ ಒಬ್ಬರಿಗೆ ತಿಂಗಳಿಗೆ ಮೂರು ಪೌಂಡು ಸಂಬಳ ಕೊಡಬೇಕೆಂದು ನಿಶ್ಚಯವಾಯಿತು. ಡರ್ಬನ್ನಿಗೆ ಸಮೀಪವಾಗಿರುವ ಯಾವುದೊಂದು ರೇಲ್ವೆ ನಿಲ್ದಾಣದ ಹತ್ತಿರದಲ್ಲಿ ಮಾರಾಟಕ್ಕೆ ಒಂದು ಸ್ಥಳ ಬೇಕೆಂದು ಪತ್ರಿಕೆಯಲ್ಲಿ ಪ್ರಕಟಿಸಿದೆ. ಕೊನೆಗೆ, ಮಾವಿನ ಗಿಡಗಳೂ ಕಿತ್ತಳೆ ಗಿಡಗಳೂ ಒಂದು ಚಿಕ್ಕ ಸುಂದರ ಊಟೆಯೂ ಇರುವ ಇಪ್ಪತ್ತು ಎಕರೆ ಭೂಮಿ ಕೊಂಡುಕೊಂಡೆ. ಅದಕ್ಕೆ ಹೊಂದಿ ಲೆಕ್ಕವಿಲ್ಲದಷ್ಟು ಹಣ್ಣಿನ ಗಿಡಗಳೂ ಒಂದು ಕುಂಬು ಮನೆಯೂ ಇರುವ ೮೦ ಎಕರೆಯ ಒಂದು ಸ್ಥಳವಿತ್ತು. ೧೦೦೦ ಪೌಂಡಿಗೆ ಇದನ್ನೂ ಕೊಂಡದ್ದಾಯಿತು. ಅಚ್ಚುಕೂಟಕ್ಕಾಗಿ ಕೂಡಲೇ ಒಂದು ಜೋಪಡಿ ಕಟ್ಟಿದೆವು. ಶ್ರೀ. ವೆಸ್ಟರೂ ಇನ್ನೂ ಕೆಲವರೂ ಬಡಿಗರೊಂದಿಗೂ ಉಪ್ಪಾರರೊಂದಿಗೂ ಅಲ್ಲಿ ಧೈರ್ಯದಿಂದ ಇರತೊಡಗಿದರು. ಎಲ್ಲ ಕಡೆಗೂ ಅಲ್ಲಿ ಹುಲ್ಲು ಹುಲುಸಾಗಿ ಬೆಳೆದಿತ್ತು. ಹಾವು ಏನೂ ಹೆದರಿಕೆ ಇಲ್ಲದೆ ಹರಿದಾಡುತಿದ್ದುವು. ಆದ್ದರಿಂದ ಅದು ಸಂಪೂರ್ಣ ಹೆದರಿಕೆಯ ಸ್ಥಳವಾಗಿತ್ತು. ಆ ಇಡೀ ಪ್ರದೇಶವನ್ನು ವಾಸಕ್ಕೆ ಯೋಗ್ಯವಾಗುವಂತೆ ಹಸನು ಮಾಡಿದೆವು. ಸುಮಾರು ಒಂದು ವಾರದಲ್ಲಿ ಹೆಚ್ಚು ಕಡಿಮೆ ಅಗತ್ಯವಿದ್ದ ಎಲ್ಲ ಸಾಮಾನೂ ಚಕ್ಕಡಿಯಿಂದ ಅಲ್ಲಿಗೆ ಸಾಗಿಸಿದೆವು. ಹೀಗೆ ರೂಪುಗೊಂಡ ಸ್ಥಳವೇ ಫಿನಿಕ್ಸ್. ಕೆಲಸವನ್ನು ಹುಡುಕಿಕೊಂಡು ನನ್ನೊಂದಿಗೆ ಹಿಂದುಸ್ಥಾನದಿಂದ ಬಂದಿದ್ದ ನನ್ನ ಗೆಳೆಯರನ್ನೂ ನೆಂಟರನ್ನೂ ಅಲ್ಲಿಗೆ ಕರೆದೊಯ್ಯುವ ಎತ್ತುಗಡೆ ಮಾಡಿದೆ. ಕೆಲವರು ಒಪ್ಪಿದರು. ಅವರಲ್ಲಿ ದಿವಂಗತ ಮಗನಲಾಲ ಗಾಂಧಿಯ ಹೆಸರನ್ನು ಮಾತ್ರ ಈಗ ನಾನು ಹೇಳಬಲ್ಲೆ. ನನ್ನೊಂದಿಗೆ ಬಾಳಬೇಕೆಂಬ ಭಾವನೆಯಿಂದ ಅವನು ತನ್ನ ಉದ್ಯೋಗ ಬಿಟ್ಟುಕೊಟ್ಟ. ಆ ಕಾಲದಲ್ಲಿ ನನ್ನ ನೈತಿಕ ಪ್ರಯೋಗಗಳಲ್ಲಿ ನನ್ನೊಂದಿಗೆ ಎಷ್ಟೋ ಜನರು ದುಡಿದರು. ಅವರೆಲ್ಲರಲ್ಲಿ ಕರ್ತೃತ್ವಶಕ್ತಿ, ಸ್ವಾರ್ಥತ್ಯಾಗ, ಭಕ್ತಿ ಮುಂತಾದುವುಗಳ ಮೂಲಕ ಇವನೆ ಮುಖ್ಯನಾಗಿದ್ದ. ಇದಲ್ಲದೆ ಕೈಗಾರಿಕೆಯ ಕೆಲಸದಲ್ಲಿಯೂ ಇವನಿಗೆ ಸಾಟಿಯಾದವರು ಅವರಲ್ಲಿ ಯಾರೂ ಇರಲಿಲ್ಲ. ದಕ್ಷಿಣ ಆಫ್ರಿಕೆಯ ಸತ್ಯಾಗ್ರಹಿಗಳ ಗುಂಪಿಗೂ ಇವನೇ ಮುಂದಾಳು. ಅಲ್ಲಿ ಸತ್ಯಾಗ್ರಹ ಕೊನೆಗಂಡ ಮೇಲೆ ಈ ಗುಂಪು ಹಿಂದುಸ್ಥಾನಕ್ಕೆ ಬಂದು ಸಾಬರಮತಿಯ ಸತ್ಯಾಗ್ರಹಾಶ್ರಮವಾಗಿ ಮಾರ್ಪಟ್ಟಿತು.

೧೯೩೮ ರಲ್ಲಿ ಇವನು ಅನಿರೀಕ್ಷಿತವಾಗಿ ಕಣ್ಣು ಮುಚ್ಚಿದ. ತನ್ನ ಮರಣದ ವರೆಗೆ ಈ ಸಂಸ್ಥೆಗೆ ಇವನೇ ಆಧಾರವಾಗಿದ್ದ. ಇದಲ್ಲದೆ ನನ್ನ ಮನೋ ರಾಜ್ಯದಲ್ಲಿ ನೇತಾಡುತಿದ್ದ ಎಲ್ಲ ತತ್ವಗಳನ್ನೂ ಬಳಕೆಗೆ ತಂದ ಅಧ್ವರ್ಯು ಇವನೇ. ಇವನ ಮರಣವೆಂದರೆ ನನಗೆ ತಡೆಯಲಾರದ ಪೆಟ್ಟಾಯಿತು.

೧೯೦೪ ರಲ್ಲಿ ಫಿನಿಕ್ಸ್ ಆಶ್ರಮ ಮೊದಲಾದುದು ಹೀಗೆ. 'ಇಂಡಿಯನ್ ಒಪೀನಿಯನ್' ಪತ್ರಿಕೆ ಎಷ್ಟೋ ಕುತ್ತುಗಳನ್ನು ದಾಟಿ ಇಂದಿಗೂ ಇಲ್ಲಿಂದಲೇ ಹೊರಡುತ್ತಿದೆ. ಈ ಪತ್ರಿಕೆಗೆ ಮೊಟ್ಟಮೊದಲಿಗೆ ಒದಗಿದ ಕಷ್ಟಗಳೂ ಏರಿಳಿತ ಗಳೂ ಅಷ್ಟಿಷ್ಟಲ್ಲ. ಮಗನಲಾಲ ಗಾಂಧಿಗೆ ಮುದ್ರಣಾಲಯದ ಯಾವ ಕೆಲಸವೂ ಗೊತ್ತಿರಲಿಲ್ಲ. ಆದರೆ ಅವನು ಅದರಲ್ಲಿ ಬೇಗನೆ ಪಳಗಿ ನಮ್ಮೆಲ್ಲ ರನ್ನೂ ಹಿಂದೆಹಾಕಿದ.

ಫಿನಿಕ್ಸಿಗೆ ಹೋಗಿ ನಿಲ್ಲುವುದಕ್ಕಿಲ್ಲ, ಅಷ್ಟರಲ್ಲಿ ನಾನು ಜೋಹಾನ್ಸ್ ಬರ್ಗಿಗೆ ಹೋಗಿ ಅಲ್ಲಿ ಮನೆ ಮಾಡಬೇಕಾಯಿತು. ಅಲ್ಲಿ ನನ್ನ ಹೊಸ ಮಹತ್ವದ ಎಲ್ಲ ಸುಧಾರಣೆಗಳನ್ನು ಶ್ರೀ. ಪೋಲಕರಿಗೆ ಹೇಳಿದೆ. ತನ್ನ ಒಂದು ಪುಸ್ತಕದಿಂದ ನನ್ನ ಜೀವನದಲ್ಲಿ ಹೊಸ ಯುಗ ಮೊದಲಾದುದನ್ನು ಕೇಳಿ ಪೋಲಕರಿಗೆ ಬಹಳ ಸಂತೋಷವಾಯಿತು. 'ಕ್ರಿಟಿಕ್' ಪತ್ರಿಕೆಯಲ್ಲಿ ಮಾಡುತಿದ್ದ ಕೆಲಸಕ್ಕೆ ಶರಣು ಹೊಡೆದು ಅವರು ನಮ್ಮ ಈ ಕುಟುಂಬಕ್ಕೆ ಬಂದು ಸೇರಿದರು. ಆದರೆ ನಾನು ಅವರನ್ನು ಅಲ್ಲಿ ಬಹಳ ದಿನ ಇರಗೊಡ ಲಿಲ್ಲ. ಜೋಹಾನ್ಸ್ ಬರ್ಗಿನಲ್ಲಿ ನನಗೆ ಒಬ್ಬನಿಗೇ ನೀಗಲಾರದಷ್ಟು ಕೆಲಸ ವಿತ್ತು. ಆದ್ದರಿಂದ ನನ್ನ ಉದ್ಯೋಗದಲ್ಲಿ ನನಗೆ ಸಹಾಯ ಮಾಡುತ್ತ ವಕೀಲರಾಗಲು ಅವರಿಗೆ ಸೂಚಿಸಿದೆ. ಹೀಗೆ ಮಾಡುವುದರಿಂದ ಕಟ್ಟಕಡೆಗೆ ನಾವಿಬ್ಬರೂ ನಿವೃತ್ತರಾಗಿ ಫಿನಿಕ್ಸಿಗೆ ಬಂದು ನಿಲ್ಲಬಹುದೆಂದು ನಾನು ಯೋಚಿಸಿದ್ದೆ. ಆದರೆ ಇದು ಕೊನೆಗೂ ಸಾಧ್ಯವಾಗಲಿಲ್ಲ. ನನ್ನ ಕೆಲಸವೋ ಹೆಚ್ಚುತ್ತಲೇ ಇತ್ತು. ಆದ್ದರಿಂದ ಫಿನಿಕ್ಸಿನಿಂದ ದೂರವಿದ್ದುಕೊಂಡು ರಸ್ಕಿನ್ನನ ಸಿದ್ಧಾಂತಕ್ಕನುಸರಿಸಿ ಮನೆವಾರ್ತೆಯನ್ನು ಸಂಪಡಿಸಿಕೊಳ್ಳು ವುದು ಮಾತ್ರ ನನಗೆ ಸಾಧ್ಯವಾಯಿತು. ಇಷ್ಟಕ್ಕೇ ನಾನು ತೃಪ್ತನಾಗ ಬೇಕಾಯಿತು. ಒಬ್ಬ ವಕೀಲನ ಮನೆಯಲ್ಲಿ ಎಷ್ಟು ಸಾಧ್ಯವೊ ಅಷ್ಟು ಮಟ್ಟಿಗಿನ ಸರಳತೆಯನ್ನು ನಮ್ಮ ಮನೆಯಲ್ಲಿ ಆರಂಭಿಸಿದೆ. ಶರೀರಶ್ರಮದ

ಎಲ್ಲ ಕೆಲಸಗಳನ್ನೂ ಮಾಡುವ ಅಭ್ಯಾಸ ಹೆಚ್ಚಾಯಿತು. ಅಂಗಡಿಯ ರೊಟ್ಟಿಯ ಬದಲು ಹೊಟ್ಟು ತೆಗೆಯದ, ಹುಳಿಯಾಗದ ಹಿಟ್ಟಿನಿಂದ ಮನೆಯಲ್ಲಿಯೆ ರೊಟ್ಟಿ ಮಾಡತೊಡಗಿದೆವು. ಈ ರೊಟ್ಟಿ ಕೈಯಿಂದ ಬೀಸಿದ ಹಿಟ್ಟಿಗೇ ಸಾಧ್ಯ. ಆದ್ದರಿಂದ ಏಳು ಪೌಂಡು ಕೊಟ್ಟು ಒಂದು ಬೀಸುವ ಕಲ್ಲು ತಂದೆ. ಆ ಕಲ್ಲಿನಲ್ಲಿ ಹಗುರವಾಗಿ ಬೀಸಲು ಇಬ್ಬರು ಬೇಕಾಗುತಿದ್ದರು. ಸಾಮಾನ್ಯವಾಗಿ ನಾನೂ ಪೋಲಕರೂ ಮಕ್ಕಳೂ ಬೀಸುತಿದ್ದೆವು. ಮಕ್ಕಳಿಗೆ ಈ ಕೆಲಸ ಮಾಡಲು ಬಲು ಹಿಗ್ಗು. ಇದರಿಂದ ಅವರಿಗೆ ಒಳ್ಳೇ ವ್ಯಾಯಾಮವೂ ಆಗುತಿತ್ತು. ಮನೆಯ ಎಲ್ಲ ಕೆಲಸ ನೋಡಿಕೊಳ್ಳಲು ಒಬ್ಬ ಆಳು ಇದ್ದ. ಮಲಮೂತ್ರಗಳನ್ನು ನಗರಸಭೆಯ ಝಾಡಮಾಲಿಯೆ ತೆಗೆಯುತಿದ್ದ. ಕಕ್ಕಸ ತೊಳೆಯುವ ಕೆಲಸ ಮಾತ್ರ ನಾವೇ ಮಾಡುತಿದ್ದೆವು; ಮನೆಯ ಆಳಿಗೆ ಬಿಡುತ್ತಿರಲಿಲ್ಲ. ಮಕ್ಕಳಿಗೆ ಇದರಿಂದ ಚೆನ್ನಾದ ಶಿಕ್ಷಣ ದೊರೆಯಿತು. ಈ ಕೆಲಸಕ್ಕೆ ನನ್ನ ಯಾವ ಮಗನೂ ಹೇಸುವುದಿಲ್ಲ. ಹೀಗೆ ಮಕ್ಕಳಿಗೆ ನೈರ್ಮಲ್ಯ ರಕ್ಷಣೆಯ ಜ್ಞಾನ ತನ್ನಿಂದ ತಾನೇ ಆಯಿತು.

ಹೀಗೆ ನಾನು ನನ್ನನ್ನೂ ಮಕ್ಕಳನ್ನೂ ಸಾಧನದ ಜೀವನಕ್ಕೆ ಸಜ್ಜುಗೊಳಿಸುತ್ತಿರುವಾಗ ಒಂದು ಘಟನೆ ನಡೆದುಹೋಯಿತು. ಇದರಿಂದ, ಪೋಲಕರು ಚಿಕ್ಕ ಮನೆಯೊಂದರಲ್ಲಿ ಇರಬೇಕೆಂದೂ ಜೋಹಾನ್ಸ್‌ಬರ್ಗಿನ ನಮ್ಮ ಮನೆ ತೆಗೆದು ಹೆಂಡತಿ ಮಕ್ಕಳನ್ನು ಫಿನಿಕ್ಸಿಗೆ ಕಳಿಸಬೇಕೆಂದೂ ನಿಶ್ಚಯ ಮಾಡಲು ನನಗೆ ಅನುಕೂಲವಾಯಿತು. ಝುಲು ಜನರ ವಿರೋಧವೇ ಈ ಘಟನೆ. ಇದಕ್ಕೆ ಸರಕಾರ ಇಟ್ಟ ಹೆಸರು 'ಝುಲು ಬಂಡಾಯ.'

## ೨೪. ಝುಲು 'ಬಂಡಾಯ'

ಬ್ರಿಟಿಷ್ ಸಾಮ್ರಾಜ್ಯಭಕ್ತನಾದ ನನಗೆ ಸಾಮ್ರಾಜ್ಯದ ಸೇವೆಗೆ ಬೋರ್ ಯುದ್ಧದ ಹಾಗೆ ಸಿಕ್ಕ ಇನ್ನೊಂದು ಸಂದರ್ಭವೆಂದರೆ ಝುಲು 'ಬಂಡಾಯ.' ಝುಲು ಜನರ ವಿಷಯದಲ್ಲಿ ನನಗೆ ಯಾವ ಡಂಕೂ ಇರಲಿಲ್ಲ. ಹಿಂದೀಯರಿಗೆ ಅವರು ಕೇಡು ಬಗೆದಿರಲೂ ಇಲ್ಲ. ಅದು 'ಬಂಡಾಯ' ಅಹುದೊ ಅಲ್ಲವೊ ಎಂಬುದೇ ನನಗೆ ಸಂದೇಹವಿತ್ತು. ಆದರೆ ಆಗ ನಾನು

ನಂಬಿದ್ದು ಬ್ರಿಟಿಷ್ ಸಾಮ್ರಾಜ್ಯ ಜಗತ್ತಿನ ಕಲ್ಯಾಣಕ್ಕಾಗಿ ಇದ್ದಿತೆಂದು. ಸಾಮ್ರಾಜ್ಯಕ್ಕೆ ಸೇರಿದ ನೇಟಾಲಿನ ಪ್ರಜೆ ನಾನಾಗಿದ್ದುದರಿಂದ ಅಗತ್ಯವಿದ್ದರೆ ಶುಶ್ರೂಷಾ ಪಥಕವನ್ನು ಸೇರಿಸಲು ಸಿದ್ಧನಿದ್ದೇನೆಂಬುದನ್ನು ಅಲ್ಲಿಯ ಗವರ್ನರರಿಗೆ ತಿಳಿಸುವುದು ಕರ್ತವ್ಯವೆಂದು ತೋರಿತು. ಈ ವಿಷಯದಲ್ಲಿ ಸರಕಾರದ ಒಪ್ಪಿಗೆ ಕೂಡಲೇ ದೊರೆತುದರಿಂದ ನಾನು ಡರ್ಬನ್ನಿಗೆ ಹೋಗಿ ಸ್ವಯಂಸೇವಕರನ್ನು ಕೂಡಿಸತೊಡಗಿದೆ. ನಮ್ಮ ಪಥಕದಲ್ಲಿ ಇಪ್ಪತ್ತನಾಲ್ಕು ಜನರಿದ್ದೆವು. ನನಗೆ ಒಂದು ಗಣ್ಯಸ್ಥಾನ ಕೊಡುವುದಕ್ಕೆಂದು ನನ್ನನ್ನು ತಾತ್ಕಾಲಿಕವಾಗಿ ಸಾರ್ಜಂಟ್ ಮೇಜರನನ್ನಾಗಿ ಮಾಡಿದರು. ನಮ್ಮ ದಳ ಸುಮಾರು ಆರು ವಾರಗಳ ವರೆಗೆ ಕೆಲಸ ಮಾಡಿತು. 'ಬಂಡಾಯ' ನಡೆದಲ್ಲಿಗೆ ಹೋಗಿ ನೋಡಲಾಗಿ ಅದು ಕರ ನಿರಾಕರಣೆಯ ಹೊರತು ಮತ್ತೇನೂ ಅಲ್ಲವೆಂದು ನನಗೆ ತೋರಿತು. ನನ್ನ ಮನಸ್ಸು ಝುಲು ಜನರ ಕಡೆಗಿದ್ದಿತು. ಗಾಯ ಹೊಂದಿದ ಝುಲು ಜನರ ಆರೈಕೆಯೆ ನಮ್ಮ ಕೆಲಸವೆಂದು ತಿಳಿದಾಗ ನನಗೆ ಬಹಳ ಸಂತೋಷವಾಯಿತು. ಈ ಕೆಲಸಕ್ಕೆ ಬಿಳಿಯರು ಮುಂದೆ ಬರುತ್ತಿರಲಿಲ್ಲ. ಜನರ ಕೊರತೆಯಿಂದ ದಿಕ್ಕು ತೋಚದವರಾದ ವೈದ್ಯ ಶಾಖಾಧಿಕಾರಿಗಳು ನಮ್ಮನ್ನು ಸಂತೋಷದಿಂದ ಬರಮಾಡಿಕೊಂಡರು. ನಮಗೆ ಕೂಡಲೇ ಗಾಯದ ಪಟ್ಟಿ, ಕ್ರಿಮಿನಾಶಕದ್ರವ, ಮುಂತಾದುವನ್ನು ಕೊಟ್ಟು ತಾತ್ಕಾಲಿಕ ಚಿಕಿತ್ಸಾಲಯಕ್ಕೆ ಕರೆದೊಯ್ದರು. ನಮ್ಮನ್ನು ಕಂಡು ಝುಲೂಗಳಿಗೂ ಸಂತೋಷವಾಯಿತು. ನಮ್ಮ ವಶದಲ್ಲಿದ್ದ ಗಾಯಾಳುಗಳು ಕಾಳಗದಲ್ಲಿ ಗಾಯಗೊಂಡವರಲ್ಲ. ಝುಲು ಗುಂಪಿನೊಳಗಿನ ಕೆಲವರನ್ನು ಸಂದೇಹದಿಂದ ಸೆರೆಗೈದಿದ್ದರು. ಸೈನ್ಯಾಧಿಕಾರಿಗಳು ಇವರಿಗೆ ಬೆತ್ತದ ಏಟಿನ ಶಿಕ್ಷೆ ವಿಧಿಸಿದ್ದರು. ಈ ಹೊಡೆತಗಳಿಂದ ತೀವ್ರಗಾಯಗಳಾಗಿದ್ದುವು. ಗುಂಪಿನೊಳಗಿನ ಉಳಿದ ಜನ ಝುಲು 'ಮಿತ್ರ'ರು. ನಮ್ಮ ದಳ ತೀವ್ರಸಂಚಾರಿ ವಿಭಾಗಕ್ಕೆ ಸೇರಿತ್ತು. ಅಪಾಯದ ಸುದ್ದಿ ಬಂದಲ್ಲೆಲ್ಲ ಹೋಗಬೇಕೆಂದು ನಮಗೆ ಅಪ್ಪಣೆ ಇದ್ದಿತು. ಎರಡು ಮೂರು ಸಲ ನಾವು ದಿನಕ್ಕೆ ನಾಲ್ವತ್ತು, ಮೈಲಿನಂತೆ ನಡೆಯಬೇಕಾಯಿತು. ಹೋದಲ್ಲೆಲ್ಲ ಝುಲು 'ಮಿತ್ರ'ರನ್ನು ಡೋಲಿಯಲ್ಲಿ ಹೊತ್ತು ತರುವ ಕೆಲಸವೇ ನಮಗೆ ದೊರೆಯುತಿತ್ತು. ನಾವು ಮಾಡಬೇಕಾದ ಶುಶ್ರೂಷೆಯ ಕೆಲಸವೂ ಇವರದೇ. ಈ ಝುಲು 'ಮಿತ್ರ'

ರನ್ನು ಸೈನಿಕರು ಅಜಾಗರೂಕತೆಯಿಂದ ಹೊಡೆದಿದ್ದರು. ದೇವರ ದಯೆಯಿಂದಲೇ ನಮಗೆ ಇಂತಹ ಸತ್ಸೇವೆ ಲಭಿಸಿತು.

ಈ 'ಬಂಡು' ಯುದ್ಧವೇ ಆಗಿರದೆ ಮನುಷ್ಯ ಬೇಟೆಯಂತೆ ತೋರಿತು. ನಾನು ಕಂಡ ಅನೇಕ ಇಂಗ್ಲಿಷ್ ಗೃಹಸ್ಥರ ತಿಳಿವಳಿಕೆಯೂ ಹಾಗೆಯೆ ಇತ್ತು. ನಿರಪರಾಧಿಗಳ ಗುಡಿಸಲುಗಳ ಮೇಲೆ ಸೈನಿಕರ ಕೋವಿಗಳಿಂದ ಪಟಾಕಿಗಳಂತೆ ಗುಂಡು ಹಾರುತ್ತಿರುವ ಸುದ್ದಿ ಕೇಳುತ್ತ ಅಲ್ಲಿಯೇ ಇರುವುದು ಸತ್ವಪರೀಕ್ಷೆಯೇ ಆಗಿತ್ತು. ಅಲ್ಲಿ ನಾವಿರದಿದ್ದರೆ ಈ ಝುಲು ಗಾಯಾಳುಗಳು ಗತಿಗೇಡಿಗಳಾಗುತಿದ್ದರು. ಆದ್ದರಿಂದ ಇವರ ಆರೈಕೆ ದೊರಕಿದುದೇ ನಮ್ಮದೊಂದು ಭಾಗ್ಯವೆಂದು ಈ ವಿಷಪ್ರಸಂಗದಲ್ಲಿ ನನ್ನ ವಿವೇಕಕ್ಕೆ ನಾನು ಸಮಾಧಾನ ಹೇಳುತ್ತಲಿದ್ದೆ.

# ೨೫. ಹೃದಯ ಮಂಥನ

ಅಂತೂ ವಿವೇಕವನ್ನೇನೋ ನಾನು ಸಂತೈಸಿದ್ದರೂ ಬಗೆ ಕದಡುವ ಮಾತುಗಳು ಬೇಕಾದಷ್ಟಿದ್ದುವು. ಝುಲು ದೇಶದ ಪ್ರಶಾಂತವಾದ ತಗ್ಗುದಿನ್ನೆಗಳಲ್ಲಿ ಗಾಯಾಳುಗಳಿದ್ದೋ, ಇಲ್ಲದೆಯೋ ಸಾಗುತ್ತಿರುವಾಗ ತುಂಬು ಯೋಚನೆಯಲ್ಲಿ ಮಗ್ನನಾಗುತ್ತಿದ್ದೆ. ಬ್ರಹ್ಮಚರ್ಯೆ, ಅದರಲ್ಲಿ ಅಡಕವಾದ ತೊಡಕುಗಳು, ಇವನ್ನು ಕುರಿತು ನನ್ನ ಮನದಲ್ಲಿ ವಿಚಾರ ತರಂಗಗಳೇಳುತಿದ್ದುವು; ಹಾಗೂ ಆ ವಿಷಯದಲ್ಲಿ ನನ್ನ ಮನವರಿಕೆಗಳು ಇನ್ನೂ ದೃಢವಾದುವು. ಇದನ್ನು ನನ್ನ ಸಂಗಡಿಗರೊಂದಿಗೆ ಚರ್ಚಿಸತೊಡಗಿದೆ. ಆತ್ಮಸಾಕ್ಷಾತ್ಕಾರಕ್ಕೆ ಬ್ರಹ್ಮಚರ್ಯೆ ಅನಿವಾರ್ಯವೆಂದು ಆಗ ನನಗೆ ತಿಳಿದಿರಲಿಲ್ಲ. ಆದರೆ ಮಾನವಸೇವೆಗಾಗಿ ಆತ್ಮಸಮರ್ಪಣೆ ಮಾಡಬೇಕೆನ್ನುವವರಿಗೆ ಅದರ ಹೊರತು ಗತಿ ಇಲ್ಲವೆಂಬುದು ಸ್ಪಷ್ಟವಾಗಿತ್ತು. ಕೊನೆಗೆ "ಇಂತಹ ಸೇವೆ ನನ್ನ ಪಾಲಿಗೆ ಹೆಚ್ಚು ಹೆಚ್ಚಾಗಿ ಬರುವುದು. ಸಂಸಾರಸುಖದಲ್ಲಿಯೂ ಮಕ್ಕಳನ್ನು ಹೆರುವುದರಲ್ಲಿಯೂ ಸಾಕುವುದರಲ್ಲಿಯೂ ತೊಡಗಿದರೆ ಈ ಕೆಲಸಕ್ಕೆ ನಾನು ಅಯೋಗ್ಯನಾಗುವೆನು" ಎಂಬುದು ಚೆನ್ನಾಗಿ ಹೊಳೆಯಿತು.

ಒಂದೇ ಮಾತಿನಲ್ಲಿ ಹೇಳುವುದಾದರೆ ಏಕಕಾಲಕ್ಕೆ ನಾನು ಯೋಗಿ

ಯಾಗಿಯೂ ಭೋಗಿಯಾಗಿಯೂ ಇರುವುದು ಸಾಧ್ಯವಿಲ್ಲ. ಎಂದರೆ ಇಂಥ ಸಂದರ್ಭದಲ್ಲಿ ನನ್ನ ಹೆಂಡತಿ ಬಸುರಿಯಾಗಿದ್ದರೆ ನಾನು ಸೇವಾಕಾರ್ಯ ದಲ್ಲಿ ತೊಡಗಿರುವುದು ಸಾಧ್ಯವಿಲ್ಲ. ಕುಟುಂಬ ಪೋಷಣೆಗೂ ಮಾನವ ಸೇವೆಗೂ ತಿಕ್ಕಾಟ ಬರದಿರಬೇಕಾದರೆ ಬ್ರಹ್ಮಚರ್ಯವೇ ಮದ್ದು. ಬ್ರಹ್ಮ ಚರ್ಯೆಯಿಂದ ಇವೆರಡಕ್ಕೂ ಪೂರ್ಣ ಹೊಂದಿಕೆಯಾಗುವುದು.

ಹೀಗೆ ನನ್ನ ದೇಹ ಕಾರ್ಯಪ್ರವೃತ್ತವಾಗಿಯೂ ಮನಸ್ಸು ಯೋಚನಾ ಪ್ರವೃತ್ತವಾಗಿಯೂ ಇತ್ತು. ಆಗ 'ಬಂಡಾಯ' ಅಡಗಿಸುವ ಕೆಲಸ ಮುಗಿಯುತ್ತ ಬಂದಿತೆಂದೂ ನಾವು ಬೇಗನೆ ತಿರಿಗಿ ಹೋಗಬೇಕಾಗುವು ದೆಂದೂ ತಿಳಿದು ಬಂದಿತು. ಮುಂದೆ ಒಂದೆರಡು ದಿನಗಳಲ್ಲಿ ನಾವು ನಿವೃತ್ತ ರಾದೆವು. ಜೊತೆಗೆ ನಮ್ಮ ಈ ಸೇವಾಕಾರ್ಯಕ್ಕಾಗಿ ವಿಶೇಷ ಕೃತಜ್ಞತೆ ಯನ್ನು ಸೂಚಿಸಿ ಬರೆದ ಗವರ್ನರರ ಕಾಗದವೂ ಬಂದಿತು.

ಫಿನಿಕ್ಸಿಗೆ ತಿರಿಗಿ ಬಂದದ್ದಾಯಿತು. ಅಲ್ಲಿ ಸಂಗಡಿಗ-ಕೆಲಸಗಾರ ರೊಂದಿಗೆ ಚರ್ಚಿಸಿ ಕಟ್ಟಕಡೆಗೆ ಆಜೀವ ಬ್ರಹ್ಮಚರ್ಯವ್ರತದ ಸಂಕಲ್ಪ ಮಾಡಿದೆ. ಆಗ ಅದರ ಮಹತ್ವವೂ ಅಪಾರತ್ವವೂ ತಿಳಿದಿರಲಿಲ್ಲವೆಂಬುದನ್ನು ನಾನು ಒಪ್ಪಿಕೊಳ್ಳಲೇಬೇಕು. ಆದರೆ ಇಂತಹ ಪವಿತ್ರ ವ್ರತ ರಕ್ಷಾಕವಚ ವಿದ್ದಂತೆ ಎಂಬುದು ನನಗೆ ಖಂಡಿತವಾಗಿತ್ತು.

ಹೀಗೆ ನಾನು ನಿರಂತರವ್ರತ ಕೈಕೊಳ್ಳಬಾರದೆಂದು ಮನವೊಲಿಸುವ ಆಕ್ಷೇಪಣೆಗಳನ್ನೆಲ್ಲ ನಿರಾಕರಿಸಿ ವ್ರತಬದ್ಧನಾದೆ. ನಿಶ್ಚಲವ್ರತ ನಮ್ಮನ್ನು ಅಪಾಯಕಾರಕ ವಿಲೋಭನಗಳಿಂದ ಕಾಪಾಡುವ ಕೋಟೆಯೆ ಸೈ. ದುರ್ಬಲತೆ ಚಂಚಲತೆಗಳನ್ನು ಅದು ಹೊರಗಟ್ಟುತ್ತದೆ. 'ಹೇವರಿಕೆ (ಜುಗುಪ್ಸೆ) ಯ ಹೊರತು ತ್ಯಾಗವು ಸಾಧ್ಯವಿಲ್ಲ' ಎಂಬ ಕವಿವಾಕ್ಯ ಯಥಾರ್ಥವಾದುದು. ಕೆಟ್ಟ ವಸ್ತುಗಳ ವಿಷಯದಲ್ಲಿ ಜುಗುಪ್ಸೆ ಉಂಟಾಗುವ ಸಂಕ್ರಮಣ (Transition) ಕಾಲದಲ್ಲಿ ವ್ರತ ಅತಿ ಅವಶ್ಯವಾದದ್ದು.

೧೯೦೬ರಲ್ಲಿ ನಾನು ಬ್ರಹ್ಮಚರ್ಯವ್ರತ ಕೈಕೊಳ್ಳುವ ವರೆಗೆ ಈ ವಿಷಯದಲ್ಲಿ ನನ್ನ ಹೆಂಡತಿಯ ಅಭಿಪ್ರಾಯ ತಿಳಿದುಕೊಂಡಿರಲಿಲ್ಲ. ಈ ನನ್ನ ನಿಶ್ಚಯಕ್ಕೆ ಅವಳು ಅಡ್ಡಬರಲಿಲ್ಲ. ಇದರಿಂದ ನನಗೆ ಪರಮ ಸಂತೋಷ ವಾದುದಲ್ಲದೆ ಅವಳಿಗೆ ಶಾಶ್ವತವಾದ ಕೀರ್ತಿ ದೊರೆಯಿತು.

ನಾನು ಬ್ರಹ್ಮಚರ್ಯವ್ರತಧಾರಿಯಾದ ಮೇಲೆ ಹಿಂದೆ ಎಂದೂ ಕಾಣದ ಸ್ವಾತಂತ್ರ್ಯವನ್ನೂ ಆನಂದವನ್ನೂ ಅನುಭವಿಸಿದೆ. ಸತ್ಯಾಗ್ರಹದ ತಳಹದಿ ಹಾಕಿದ್ದು ಇದಾದ ಸುಮಾರು ಒಂದು ತಿಂಗಳ ಮೇಲೆ. ಬ್ರಹ್ಮಚರ್ಯವ್ರತ ತಿಳಿಯದಂತೆಯೆ, ಒಳಗಿಂದೊಳಗೇ, ನನ್ನನ್ನು ಇದಕ್ಕೆ ಅಣಿಮಾಡುತ್ತಲಿತ್ತು. ಸತ್ಯಾಗ್ರಹ ಮೊದಲಿಗೇ ಹಾಕಿಟ್ಟ ಒಂದು ಹಂಚಿಕೆಯಲ್ಲ. ನಾನು ಬಯಸದೆ ತನ್ನಿಂದ ತಾನೇ ಬಂದ ವಸ್ತುವದು. ಅದಕ್ಕೂ ಮುಂಚಿನ ನನ್ನ ನಡತೆಯೆಲ್ಲ ನನ್ನನ್ನು ಆ ಗುರಿಯ ಕಡೆಗೇ ಸಾಗಿಸುತಿದ್ದಿತೆಂದು ಈಗ ನನಗೆ ತೋರುತ್ತಿದೆ. ಬ್ರಹ್ಮಚರ್ಯವ್ರತಕ್ಕಾಗಿಯೋ ಏನೋ ಎಂಬಂತೆ ಜೊಹಾನ್ಸ್‌ಬರ್ಗಿನಲ್ಲಿ ಕುಟುಂಬದ ವೆಚ್ಚ ಬಹುಮಟ್ಟಿಗೆ ಕಡಿಮೆ ಮಾಡಿದ್ದೆ. ಫಿನಿಕ್ಸಿಗೆ ಹೋಗಿ ವ್ರತವನ್ನೇ ಕೈಕೊಂಡೆ.

ಬ್ರಹ್ಮಚರ್ಯ ಅತಿ ಆನಂದದಾಯಕವೆಂಬುದು ನಿಜ. ಆದರೆ ಸುಲಭ ಸಾಧ್ಯವೆಂದು ಯಾರೂ ತಿಳಿದುಕೊಳ್ಳದಿರಲಿ. ಅದು ಅತಿ ಕಠಿಣವ್ರತವೆಂಬುದು ಈ ಮುಪ್ಪಿನಲ್ಲಿಯೂ ನನಗೆ ಸ್ಪಷ್ಟವಾಗಿ ತೋರುತ್ತದೆ. ಅದರ ಆಚರಣೆ ಯೆಂದರೆ ಕತ್ತಿಯ ಅಲಗಿನಮೇಲೆ ನಡೆದಂತೆ ಎಂಬ ಮಾತು ದಿನದಿನವೂ ಅನುಭವವಾಗುತ್ತಿದೆ. ಆದಕ್ಕಾಗಿ ನಾವು ನಿತ್ಯಜಾಗ್ರತರಾಗಿರುವುದು ಅಗತ್ಯ ವೆಂದು ಕ್ಷಣಕ್ಷಣವೂ ಮನಗಾಣುತಿದ್ದೇನೆ.

ಕಾಯಾ ವಾಚಾ ಮನಸಾ ಸಂಯಮದಿಂದಿರುವುದೇ ಬ್ರಹ್ಮಚರ್ಯ. ಬ್ರಹ್ಮಚಾರಿಗೂ ಸ್ವೈರವೃತ್ತಿಯವನಿಗೂ ಇರುವ ಅಂತರವನ್ನು ತಿಳಿದು ಕೊಳ್ಳೋಣ. ಕಣ್ಣಿನ ಉಪಯೋಗ ಇಬ್ಬರೂ ಮಾಡುತ್ತಾರೆ. ಬ್ರಹ್ಮಚಾರಿ ಕಣ್ಣನ್ನು ದೇವರ ಮಹಿಮೆ ನೋಡಲು ಉಪಯೋಗಿಸಿದರೆ ಸ್ವೇಚ್ಛಾವಿಹಾರಿ ಸುತ್ತುಮುತ್ತಲಿನ ತುಚ್ಛ ಪದಾರ್ಥಗಳನ್ನು ನೋಡಲು ಉಪಯೋಗಿಸು ತ್ತಾನೆ. ಕಿವಿಯ ಉಪಯೋಗವೂ ಹಾಗೆಯೆ. ಒಬ್ಬನು ಈಶಸ್ತುತಿಗೆ ತನ್ನ ಕಿವಿಯನ್ನು ಮೀಸಲಾಗಿಟ್ಟರೆ ಇನ್ನೊಬ್ಬನು ವ್ಯರ್ಥವಾದ ಹರಟೆಗೆ, ಅಶ್ಲೀಲ ವಾದ ಮಾತುಕತೆಗೆ ಇಡುತ್ತಾನೆ. ಇಬ್ಬರೂ ಜಾಗರಣೆ ಮಾಡುವುದುಂಟು. ಒಬ್ಬನು ಧ್ಯಾನ ಪ್ರಾರ್ಥನೆಗಳಲ್ಲಿ ತೊಡಗಿರುವಾಗ ಇನ್ನೊಬ್ಬನು ತಾಮಸ ಪೂರ್ಣ ನಿರರ್ಥಕ ವಿನೋದದಲ್ಲಿ ಮತ್ತನಾಗುತ್ತಾನೆ. ಆತ್ಮತೃಪ್ತಿ ಇಬ್ಬರಿಗೂ ಇದೆ. ದೇವನಿವಾಸವಾದ ಈ ದೇಹದ ಭದ್ರತೆಯಲ್ಲಿ ಒಬ್ಬನು ತೊಡಗಿರು

ತ್ತಾನೆ. ಇನ್ನೊಬ್ಬನು ಅತಿಭಕ್ಷಣದಿಂದ ಅದನ್ನು ತಿಪ್ಪೆಯನ್ನಾಗಿ ಮಾಡುವುದರಲ್ಲಿ ಸಂತೋಷಪಡುತ್ತಾನೆ.

ಎಡೆಬಿಡದೆ ದಣಿವಿಲ್ಲದೆ ಪ್ರಯತ್ನಪಟ್ಟರೆ ಮಾತ್ರ ಇಂತಹ ಬ್ರಹ್ಮಚರ್ಯ ಸಾಧ್ಯ. ದೇವರನ್ನು ಕಾಣಬೇಕೆಂದು ಬ್ರಹ್ಮಚರ್ಯ ಪಾಲನೆಮಾಡುವವರು ನಿರಾಶರಾಗುವ ಕಾರಣವಿಲ್ಲ. ಸ್ವಪ್ರಯತ್ನದಲ್ಲಿಟ್ಟಷ್ಟು ವಿಶ್ವಾಸವನ್ನೇ ಇವರು ದೇವರಲ್ಲಿಡಬೇಕು. 'ನಿರಾಹಾರಿ ಭೋಗಶಕ್ತಿವಿಹೀನನಾಗುತ್ತಾನೆ. ಆದ್ದರಿಂದ ವಿಷಯಗಳು ಅವನಿಂದ ದೂರ ಹೋಗುತ್ತವೆ. ಇಂದ್ರಿಯಾತೀತನಾದ ಪರಮಾತ್ಮನ ದರ್ಶನವಾಯಿತೆಂದರೆ ವಿಷಯಗಳಲ್ಲಿಯ ರುಚಿಯೇ ಮಾಯವಾಗುತ್ತದೆ' ಎಂದು ಭಗವದ್ಗೀತೆ ಹೇಳುತ್ತದೆ. ಆದ್ದರಿಂದ ಮೋಕ್ಷಬಯಸುವವನಿಗೆ ದೇವರ ನಾಮವೂ ಕೃಪೆಯೂ ಕಟ್ಟಕಡೆಯ ಆಧಾರಗಳು. ಹಿಂದುಸ್ಥಾನಕ್ಕೆ ಬಂದ ಮೇಲೆ ಮಾತ್ರ ನನಗೆ ಈ ಸತ್ಯ ಹೊಳೆಯಿತು.

## ೨೬. ವಕೀಲತನದ ಕೆಲವು ನೆನಹುಗಳು

ದಕ್ಷಿಣ ಆಫ್ರಿಕಯಲ್ಲಿ ನನ್ನ ವಕೀಲತನದಲ್ಲಿ ನಡೆದ ಒಂದೆರಡು ಸಂಗತಿ ಹೇಳೋಣ ವಕೀಲನ ಕಸಬೂ ಸುಳ್ಳಾಡುವವನ ಕಸಬೂ ಒಂದೇ ಎಂದು ನಾನು ಚಿಕ್ಕವನಿದ್ದಾಗ ಕೇಳಿದ ಮಾತು. ನನಗೆ ಸುಳ್ಳಿನಿಂದ ದುಡ್ಡೂ ಬೇಕಾಗಿರಲಿಲ್ಲ, ಹೆಸರೂ ಬೇಕಾಗಿರಲಿಲ್ಲ. ಎಂದ ಮೇಲೆ ಈ ನಾಣ್ಣುಡಿಗೆ ನಾನೇಕೆ ಹೆದರಬೇಕು? ನನಗೆ ನೆನಪಿರುವ ಮಟ್ಟಿಗೆ ಈ ಉದ್ಯೋಗದಲ್ಲಿ ನಾನು ಸುಳ್ಳಿಗೆ ಇಂಬುಗೊಟ್ಟಿಲ್ಲ. ವಕೀಲತನದ ನನ್ನ ವ್ಯವಸಾಯದ ಬಹುಭಾಗ ಸಾರ್ವಜನಿಕ ಹಿತಕ್ಕಾಗಿಯೆ ವೆಚ್ಚವಾಯಿತು. ಯಾರಿಗೂ ಜಡವಾಗುವಂತೆ ನಾನು ಹಣ ಕೇಳಲಿಲ್ಲ. ಒಮ್ಮೊಮ್ಮೆ ಕೈಯಿಂದ ತೆತ್ತದ್ದೂ ಉಂಟು. ಮೊಕದ್ದಮೆ ಗೆದ್ದರೆ ಇಂತಿಷ್ಟು ಕೊಡಬೇಕೆಂದು ಎಂದಾದರೂ ಗೊತ್ತುಮಾಡಿದ್ದು ನನಗೆ ನೆನಪಿಲ್ಲ. ನಾನು ಸುಳ್ಳುವ್ಯವಹಾರ ಕೈಕೊಳ್ಳುವವನಲ್ಲವೆಂದು, ಸಾಕ್ಷಿದಾರನಿಂದ ಸುಳ್ಳು ಹೇಳಿಸುವವನಲ್ಲವೆಂದು, ಪ್ರತಿ ಒಬ್ಬ ಹೊಸ ಕಕ್ಷಿಗಾರನಿಗೆ ಆರಂಭದಲ್ಲಿಯೆ ಎಚ್ಚರಕೊಡುತಿದ್ದೆ. ಇದರ ಪರಿಣಾಮವೇನಾಯಿತೆಂದರೆ ನಾನು ಸುಳ್ಳು ಮೊಕದ್ದಮೆ ಹಿಡಿಯುವವನಲ್ಲವೆಂದು ಹೆಸರಾಯಿತು.

ಒಮ್ಮೆ ಜೋಹಾನ್ಸ್‌ಬರ್ಗ್ ಕೋರ್ಟಿನಲ್ಲಿ ನ್ಯಾಯಾಧೀಶರೆದುರು ವ್ಯವಹರಣೆ ಒಂದನ್ನು ನಡೆಸುತ್ತಲಿದ್ದೆ. ಆಗ ನನ್ನ ಕಕ್ಷಿಗಾರ ನನ್ನನ್ನು ಮೋಸಗೊಳಿಸಿದ್ದನೆಂದು ತಿಳಿಯಿತು. ಅವನು ನ್ಯಾಯಾಧೀಶರೆದುರು ತನ್ನ ಹೇಳಿಕೆ ಕೊಡುವಾಗ ತಬ್ಬಿಬ್ಬಾದುದನ್ನು ನಾನು ಕಂಡೆ. ಮೊಕದ್ದಮೆಯನ್ನು ಅಲ್ಲಿಗೇ ನಿಲ್ಲಿಸಿ ಅದನ್ನು ತಳ್ಳಿಹಾಕಲು ನ್ಯಾಯಾಧೀಶರಿಗೆ ಬಿನ್ನವಿಸಿದೆ. ಎದುರುಕಡೆಯುವರು ಇದರಿಂದ ಬೆರಗಾದರು. ನ್ಯಾಯಾಧೀಶರು ಸಂತುಷ್ಟರಾದರು. ಈ ಮೊಕದ್ದಮೆಯಲ್ಲಿ ನಡೆದ ರೀತಿಯಿಂದ ನನ್ನ ಉದ್ಯೋಗಕ್ಕೆ ಪೆಟ್ಟು ಬೀಳಲಿಲ್ಲ; ಮಾತ್ರವಲ್ಲ, ಇನ್ನೂ ಅನುಕೂಲವೇ ಆಯಿತು. ಸತ್ಯವನ್ನು ಕುರಿತ ನನ್ನ ಶ್ರದ್ಧೆಯಿಂದ ಸಹೋದ್ಯೋಗಿಗಳಲ್ಲಿಯೂ ನನ್ನ ಖ್ಯಾತಿ ಹೆಚ್ಚಿತು. ವರ್ಣಭೇದದ ತೊಡಕಿನಲ್ಲಿಯೂ ಕೆಲವೊಮ್ಮೆ ಅವರ ಪ್ರೇಮವನ್ನು ಪಡೆಯುತ್ತಲಿದ್ದೆ.

ದಿವಂಗತ ಪಾರ್ಸಿ ರುಸ್ತುಂಜಿಯವರೆಂದರೆ ದಕ್ಷಿಣ ಆಫ್ರಿಕೆಯಲ್ಲಿ ಗೊತ್ತಿಲ್ಲದ ಹಿಂದೀಯನಿರಲಿಲ್ಲ. ಅಷ್ಟು ಪ್ರಖ್ಯಾತವಾಗಿತ್ತು ಅವರ ಹೆಸರು. ಇಂತಹ ಮಹಾನುಭಾವರು ಒಮ್ಮೆ ಒಂದು ದೊಡ್ಡ ಪೇಚಾಟಕ್ಕೆ ಸಿಕ್ಕಿಬಿದ್ದರು. ಬಹುಕಾಲದಿಂದಲೂ ಇವರು ನನ್ನ ಸಂಗಡಿಗ– ಕೆಲಸಗಾರರು. ತಮ್ಮ ವ್ಯವಹಾರದ ಎಲ್ಲ ಮಾತುಗಳನ್ನು ಇವರು ನನ್ನಲ್ಲಿ ಹೇಳುತಿದ್ದರು. ಆದರೆ ಒಂದು ಸಂಗತಿಯ ಸುಳಿವು ಕೂಡ ನನಗೆ ಹತ್ತದಂತೆ ಜಾಗರೂಕರಾಗಿದ್ದರು. ಮುಂಬಯಿ ಕಲಕತ್ತೆಗಳಿಂದ ಇವರು ಬಹಳ ಸರಕು ತರಿಸುತಿದ್ದರು. ಒಮ್ಮೊಮ್ಮೆ ಸುಂಕ ಕೊಡದೆ ಕಳ್ಳತನದಿಂದ ಸಾಮಾನು ಸಾಗಿಸುತಿದ್ದರು. ಸುಂಕದ ಅಧಿಕಾರಿಗಳಿಗೂ ಇವರಿಗೂ ಅತಿ ಸ್ನೇಹ. ಹೀಗಿದ್ದುದರಿಂದ ಯಾರೂ ಇವರ ಮೇಲೆ ಸಂದೇಹಗೊಳ್ಳುವಂತಿರಲಿಲ್ಲ. ಆದರೆ ಈ ಸಂದರ್ಭದಲ್ಲಿ ಇವರ ಸಾಮಾನು–ಪಟ್ಟಿ (Invoice) ಯಲ್ಲಿ ಸಂದೇಹ ಬಂದು ಇವರ ಮೋಸ ಹೊರಗೆ ಬಂತು. ಆಗ ಇವರು ದುಃಖದಿಂದಲೂ ಪಶ್ಚಾತ್ತಾಪದಿಂದಲೂ ನನ್ನಲ್ಲಿಗೆ ಓಡಿಬಂದರು. ಕಣ್ಣೀರು ಕೆನ್ನೆಯ ಮೇಲೆ ಉರುಳುತ್ತಲಿತ್ತು. ನಾನು ಅವರನ್ನು ಸಂತವಿಸಿ 'ಈ ಆಪತ್ತಿನಿಂದ ಬಿಡುಗಡೆಯಾಗಲು ನನಗೆ ಗೊತ್ತಿರುವ ಹಂಚಿಕೆ ಒಂದೇ— ಮಾಡಿದ ತಪ್ಪನ್ನು ಪ್ರಾಮಾಣಿಕತನದಿಂದ ಒಪ್ಪಿಕೊಳ್ಳುವುದು' ಎಂದು ಹೇಳಿದೆ.

"ನಿಮ್ಮಲ್ಲಿ ಒಪ್ಪಿಕೊಂಡರೆ ಸಾಲದೆ?" —ಅವರು ಕೇಳಿದರು.

"ನನ್ನನ್ನು ಅಲ್ಲವಲ್ಲ ನೀವು ಮೋಸಗೊಳಿಸಿದ್ದು? ಸರಕಾರಕ್ಕೆ ಮೋಸ ಮಾಡಿ ನನ್ನಲ್ಲಿ ಒಪ್ಪಿಕೊಂಡರೆ ಪ್ರಯೋಜನವೇನು?"

ನಾವಿಬ್ಬರೂ ಹೋಗಿ ಅವರ ವಕೀಲರ ಸಲಹೆ ಕೇಳಿದೆವು. ಅವರಿಗೆ ನನ್ನ ಸೂಚನೆ ಸರಿದೋರಲಿಲ್ಲ. ಆದರೆ ಪಾರ್ಸಿ ರುಸ್ತುಂಜಿಯವರು ನಾನು ಹೇಳಿದಂತೆ ಕೇಳುವುದನ್ನೇ ನಿಶ್ಚಯಿಸಿದರು. 'ಸುಂಕದ ಅಧಿಕಾರಿಯನ್ನೂ ಸರಕಾರದ ವಕೀಲರನ್ನೂ ನಾನು ಕಾಣುತ್ತೇನೆ. ಮೊಕದ್ದಮೆ ಹೂಡು ವವರು ಸರಕಾರದ ವಕೀಲರು. ಅವರಿಬ್ಬರೂ ವಿಧಿಸಿದ ದಂಡ ತೆರಲು ಸಿದ್ಧ ರಿರುವುದಾಗಿ ನೀವು ಹೇಳಬೇಕು. ಇದಕ್ಕೆ ಅವರು ಒಪ್ಪದಿದ್ದರೆ ನೀವು ಸೆರೆ ಮನೆಗೆ ಹೋಗಬೇಕಾಗುವುದು. ನಾಚಿಕೆ ಇರುವುದು ಸೆರೆಮನೆ ಸೇರುವು ದರಲ್ಲಿ ಅಲ್ಲ; ಕೆಟ್ಟ ಕೆಲಸ ಮಾಡುವುದರಲ್ಲಿ' ಎಂದೆ ನಾನು.

ಪಾರ್ಸಿ ರುಸ್ತುಂಜಿಯವರಿಗೆ ಇದೆಲ್ಲವೂ ತತ್ಕಾಲಕ್ಕೇ ಒಪ್ಪಿಗೆಯಾಯಿ ತೆಂದು ಹೇಳಲಾರೆ. ಆದರೆ ಅವರು ಎದೆಗಾರರು. ಅವರು 'ಆಗಲಿ. ನಾನು ಸಂಪೂರ್ಣವಾಗಿ ನಿಮ್ಮ ಕೈಯಲ್ಲಿದ್ದೇನೆಂದು ಮೊದಲಿಗೇ ಹೇಳಿದ್ದೇನೆ' ಎಂದರು.

ನನ್ನಲ್ಲಿದ್ದ ಮನವೊಲಿಕೆಯ ಎಲ್ಲ ಸಾಮರ್ಥ್ಯವನ್ನೂ ಈ ವ್ಯವಹಾರ ದಲ್ಲಿ ಉಪಯೋಗಿಸಬೇಕಾಯಿತು. ಇದಕ್ಕೆ ಸಂಬಂಧಪಟ್ಟ ಇಬ್ಬರು ಅಧಿ ಕಾರಿಗಳನ್ನೂ ಹೋಗಿ ಕಂಡೆ. ನನ್ನ ಪೂರ್ಣ ಸರಳತನಕ್ಕೆ ಅವರು ಮನ ಸೋತರು. ನಾನು ಯಾವುದನ್ನೂ ಮರೆಮಾಚಿಲ್ಲವೆಂದು ಅವರಿಗೆ ಮನ ವರಿಕೆಯಾಯಿತು. ಪಾರ್ಸಿ ರುಸ್ತುಂಜಿಯವರಿಗೆ ಒದಗಿದ ವಿಪತ್ತು ಒಪ್ಪಂದ ದಲ್ಲಿ ಕೊನೆಗಂಡಿತು. ಸುಂಕ ಕೊಡದೆ ಉಳಿಸಿಕೊಂಡ ಹಣದ ಇಮ್ಮಡಿ ಮೊತ್ತವನ್ನು ತಪ್ಪುಕಾಣಿಕೆಯೆಂದು ತೆರಬೇಕೆಂದು ನಿರ್ಣಯವಾಯಿತು. ಪಾರ್ಸಿ ರುಸ್ತುಂಜಿಯವರು ಈ ಇಡೀ ಘಟನೆಯನ್ನು ಸಂಕ್ಷೇಪವಾಗಿ ಬರೆಯಿಸಿ ತಮ್ಮ ಚಾವಡಿಯಲ್ಲಿ ತೂಗು ಹಾಕಿಸಿದರು—ತಮ್ಮ ಉತ್ತರಾಧಿಕಾರಿಗಳಿಗೂ ಜೊತೆಯ ವರ್ತಕರಿಗೂ ತಕ್ಕ ಪಾಠವಾಗಲಿ ಎಂದು.

✲

# ೨೭. ಸತ್ಯಾಗ್ರಹದ ಹುಟ್ಟು

ಝುಲು 'ಬಂಡಾಯ'ದ ಕಾಲದ ನಮ್ಮ ಕೆಲಸವನ್ನು ಪೂರೈಸಿ ಫಿನಿಕ್ಸಿಗೆ ಹಿಂದಿರುಗಿದ ಮೇಲೆ, ಸಂಗಡಿಗರೊಡನೆ ನನ್ನ ಹಂಚಿಕೆಗಳನ್ನೂ ಜೀವನದ ಧ್ಯೇಯಗಳನ್ನೂ ಕುರಿತು ಚರ್ಚಿಸುತ್ತಲಿದ್ದೆ. ಆಗ, ಟ್ರಾನ್ಸ್‌ವಾಲ್ ಸರಕಾರ ಒಂದು ವಿಶೇಷ ಗ್ಯಾಝೆಟ್ ಮೂಲಕ ೧೯೦೬ ನೆ ಅಗಸ್ಟ್ ೨೨ ರಲ್ಲಿ ಪ್ರಕಟಿಸಿದ ವಿಪರೀತ ಶಾಸನ (Ordinance)ದ ಕರಡು ನನ್ನ ದೃಷ್ಟಿಗೆ ಬಿತ್ತು. ಈ ಕಟ್ಟಳೆಗೆ ತಲೆಬಾಗುವುದೆಂದರೆ ದಕ್ಷಿಣ ಆಫ್ರಿಕೆಯ ಹಿಂದೀಯರ ಸರ್ವನಾಶಕ್ಕೆ ಆಮಂತ್ರಣವಿತ್ತಂತೆ.

ಈ ಕಟ್ಟಳೆಯ ಮೇರೆಗೆ ಟ್ರಾನ್ಸ್‌ವಾಲಿನಲ್ಲಿರಬಯಸುವ ಎಂಟು ವರ್ಷಕ್ಕೆ ಮೇಲ್ಪಟ್ಟ ಹಿಂದುಸ್ಥಾನದ ಪ್ರತಿಯೊಬ್ಬ ಗಂಡಸು, ಹೆಂಗಸು ಏಶಿಯಾಟಿಕ್ ರೆಜಿಸ್ಟ್ರಾರರಲ್ಲಿ ತನ್ನ ಹೆಸರು ರೆಜಿಸ್ಟರ್ ಮಾಡಿಸತಕ್ಕದ್ದು; ಮತ್ತು ಆ ಬಗೆಗೆ ಒಂದು ಆಧಾರಪತ್ರ (Certificate) ಪಡೆಯತಕ್ಕದ್ದು.

ರೆಜಿಸ್ಟರ್ ಮಾಡಿಸುವುದಕ್ಕಾಗಿ ಅರ್ಜಿ ಕಳಿಸುವವರು ತಮ್ಮ ಅರ್ಜಿಯೊಂದಿಗೆ ಹಳೆಯ ಅಪ್ಪಣೆಚೀಟಿ (permit) ಯನ್ನೂ ಒಪ್ಪಿಸಬೇಕಾದ್ದಿತು. ಅರ್ಜಿಯಲ್ಲಿ ತಮ್ಮ ಹೆಸರು, ವಾಸಸ್ಥಳ, ಜಾತಿ, ವಯಸ್ಸು ಮುಂತಾದ ವಿವರಗಳಿರಬೇಕು. ರೆಜಿಸ್ಟ್ರಾರನು ಅರ್ಜಿದಾರನ ದೇಹದ ಮೇಲಿರುವ ಮಹತ್ವದ ಗುರುತುಗಳನ್ನು ಬರೆದುಕೊಂಡು ಅವನ ಹೆಬ್ಬೆಟ್ಟು ಮತ್ತು ಇತರ ಬೆರಳುಗಳ ಗುರುತು ಪಡೆಯಬೇಕಾಗಿದ್ದಿತು. ಗೊತ್ತಾದ ದಿನದೊಳಗೆ ಅರ್ಜಿ ಕಳಿಸದಿರುವ ಹಿಂದೀಯನು ಟ್ರಾನ್ಸ್‌ವಾಲಿನಲ್ಲಿ ವಾಸಿಸುವ ಹಕ್ಕನ್ನು ಕಳೆದುಕೊಳ್ಳಬೇಕಾಗಿದ್ದಿತು. ಇದಲ್ಲದೆ ಅರ್ಜಿ ಕಳಿಸದಿರುವುದು ಕಟ್ಟಳೆಯ ಮೇರೆಗೆ ಅಪರಾಧ. ಇದಕ್ಕಾಗಿ ತಪ್ಪುಗಾರನಿಗೆ ದಂಡ ವಿಧಿಸುವ, ಸೆರೆಮನೆಗಟ್ಟುವ, ಇಲ್ಲವೆ ಗಡಿದಾಟಿಸುವ ಸ್ವಾತಂತ್ರ್ಯವೂ ನ್ಯಾಯಾಸ್ಥಾನಕ್ಕಿತ್ತು.

ಮುಖ್ಯರಾದ ಕೆಲವು ಹಿಂದೀಯರ ಚಿಕ್ಕ ಸಭೆಯೊಂದು ಅಷ್ಟರಲ್ಲಿ ಸೇರಿತು. ಅಲ್ಲಿ ಈ ಕರಡುಶಾಸನವನ್ನು ಶಬ್ದಶಃ ವಿವರಿಸಿದೆ. ಇದರಿಂದ ನನ್ನಂತೆ ಸಭಿಕರೂ ಗಾಬರಿಗೊಂಡರು. ಪರಿಸ್ಥಿತಿಯ ಅರಿವು ಅಲ್ಲಿ ಸೇರಿದ

ಎಲ್ಲರಿಗೂ ಆಯಿತು. ಒಂದು ಸಾರ್ವಜನಿಕ ಸಭೆ ಸೇರಿಸಬೇಕೆಂದು ಆ ಕೂಟದಲ್ಲಿ ನಿರ್ಣಯವಾಯಿತು.

ಗೊತ್ತಾದ ಮೇರೆಗೆ ೧೯೦೬ ನೆ ಸಪ್ಟಂಬರ್ ೧೧ ರಲ್ಲಿ ಸಾರ್ವಜನಿಕ ಸಭೆ ಸೇರಿತು. ಈ ಸಭೆಯಲ್ಲಿ ತೀರ್ಮಾನವಾದ ಅತಿ ಮುಖ್ಯ ಗೊತ್ತುವಳಿಯೆಂದರೆ ಪ್ರಖ್ಯಾತವಾದ ನಾಲ್ಕನೆ ಗೊತ್ತುವಳಿ. ಸಭಿಕರಿಗೆ ಈ ಗೊತ್ತುವಳಿಯ ಅರ್ಥವನ್ನು ಸರಿಯಾಗಿ ವಿವರಿಸಿದೆ. ಇದು ಹೀಗಿತ್ತು:— 'ಈ ಸಭೆಯು ತೀವ್ರವಾದ ಪ್ರತಿಭಟನೆಯನ್ನು ಲೆಕ್ಕಿಸದೆ ಈ ಕರಡುಶಾಸನ ಕಟ್ಟಳೆಯಾಗಿ ಪರಿಣಮಿಸಿದರೆ ಅದಕ್ಕೆ ಖಂಡಿತವಾಗಿಯೂ ತಲೆ ತಗ್ಗಿಸಬಾರದೆಂದು ಈ ಸಭೆ ನಿರ್ಣಯಿಸುತ್ತದೆ.' ಆಗಿನ ಮಟ್ಟಿಗೆ 'ಶಾಂತ ವಿರೋಧ' (Passive resistance) ವೆಂದು ಹೆಸರು ಪಡೆದ ಈ ಚಳುವಳಿ ಮುಂದೆ ಬೇಗನೆ 'ಸತ್ಯಾಗ್ರಹ'ವಾಯಿತು.

ಈ ಕರಡುಶಾಸನ ಕಟ್ಟಳೆಯಾಗಿ ಪರಿಣಮಿಸುವುದನ್ನು ತಪ್ಪಿಸುವುದು ನಮ್ಮಿಂದ ಸಾಧ್ಯವಾಗಲಿಲ್ಲ. ಸರ್ಪಕಾವಲು ನಡೆಯುತಿದ್ದರೂ ಜನಾಭಿಪ್ರಾಯವನ್ನು ಲೆಕ್ಕಿಸದೆ ಕೆಲವು ಹಿಂದೀಯರು ತಮ್ಮ ಹೆಸರು ರೆಜಿಸ್ಟರ್ ಮಾಡಿಸಿದರು. ಏಶಿಯಾಟಿಕ್ ಖಾತೆಯವರು ಎಷ್ಟು ಪ್ರಯತ್ನಿಸಿದರೂ ೫೦೦ ಕ್ಕಿಂತ ಹೆಚ್ಚು ಜನ ರೆಜಿಸ್ಟರ್ ಮಾಡಿಸಲಿಲ್ಲ. ಆದ್ದರಿಂದ ಅವರು ನಿರಾಶರಾಗಿ ಅಲ್ಲಲ್ಲಿ ಕೆಲವರನ್ನು ಸೆರೆಹಿಡಿಯಲು ನಿರ್ಧರಿಸಿದರು. ಹಾಗು ಜರ್ಮಿಸ್ಟನ್ನಿನಲ್ಲಿ ರಾಮಸುಂದರರೆಂಬುವವರನ್ನು ಹಿಡಿದರು. ರಾಮಸುಂದರರು ಅಲ್ಲಿ ನೆಲೆಗೊಂಡಿದ್ದ ಅನೇಕ ಹಿಂದೀಯರಲ್ಲಿ ಒಬ್ಬರು. ಇವರು ಧೀರರಂತೆ ಕಾಣುತಿದ್ದರು. ಸ್ವಲ್ಪ ವಾಕ್ಪಟುತ್ವವೂ ಇವರಿಗಿತ್ತು. ಅಂದಿನವರೆಗೆ ಜರ್ಮಿಸ್ಟನ್ನಿನ ನಾಲ್ಕು ಜನರಿಗೆ ಮಾತ್ರ ಗೊತ್ತಿದ್ದ ಇವರು ಸೆರೆಯಾದೊಡನೆ ನಾಲ್ಕೂ ಕಡೆಗೆ ಪ್ರಸಿದ್ಧರಾದರು. ನ್ಯಾಯಾಸ್ಥಾನ ಇವರನ್ನು ಒಬ್ಬ ಸಾಮಾನ್ಯ ಸೆರೆಯಾಳಿನಂತೆ ತಿಳಿಯದೆ ಒಂದು ಸಂಗಡದ ಒಬ್ಬ ಪ್ರತಿನಿಧಿಯೆಂದು ತಕ್ಕ ಗೌರವ ತೋರಿಸಿತು. ನ್ಯಾಯಾಸ್ಥಾನದಲ್ಲಿ ನಡೆದ ಇವರ ವಿಚಾರಣೆಗೆ ಕುತೂಹಲಿಗಳಾದ ಅನೇಕ ಹಿಂದೀಯರು ಸೇರಿದರು. ರಾಮಸುಂದರರಿಗೆ ಒಂದು ತಿಂಗಳು ಸಾದಾ ಶಿಕ್ಷೆಯಾಯಿತು. ಜೋಹಾನ್ಸ್‌ಬರ್ಗ್ ಸೆರೆಮನೆಯ ಯುರೋಪಿಯನ್ ವಿಭಾಗದ ಪ್ರತ್ಯೇಕವಾದ ಒಂದು ಕೋಣೆ

ಇವರಿಗೆ ಸೆರೆಮನೆಯಾಯಿತು. ಇವರಿಗೆ ಶಿಕ್ಷೆಯಾದ ದಿನವನ್ನು ಉತ್ಸವದ ದಿನವೆಂದು ಮಹಾ ವೈಭವದಿಂದ ಆಚರಿಸಲಾಯಿತು.

ಆದರೆ ರಾಮಸುಂದರರ ಜೊಳ್ಳುತನ ಬೇಗನೆ ಹೊರಬಿತ್ತು. ಇವರಿಗೆ ಹಿಂದೀ ಜನತೆಯೂ ಸೆರೆಮನೆಯ ಅಧಿಕಾರಿಗಳೂ ಪ್ರೀತ್ಯಾದರಗಳನ್ನು ತೋರಿಸಿದರು. ಆದರೂ ಸೆರೆಮನೆಗೆ ಇವರು ಬೇಸರಗೊಂಡು ಟ್ರಾನ್ಸ್ವಾಲಿಗೂ ಈ ಚಳುವಳಿಗೂ ಕೊನೆಯ ಶರಣು ಹೊಡೆದರು.

ರಾಮಸುಂದರರ ಕತೆ ಹೇಳಿದ್ದು ಒಂದು ತತ್ತ್ವವನ್ನು ವಿಶದಪಡಿಸಲಿಕ್ಕೆ; ಅವರ ತಪ್ಪು ಎತ್ತಿ ತೋರಿಸುವುದಕ್ಕಲ್ಲ. ಪ್ರತಿ ಒಂದು ಶುದ್ಧ ಚಳುವಳಿಯಲ್ಲಿಯೂ ಪವಿತ್ರರಾದ ದಂಡಾಳುಗಳು ಮಾತ್ರ ಬಂದು ಸೇರುವಂತೆ ನೋಡಿಕೊಳ್ಳುವುದು ಅದರ ಮುಂದಾಳುಗಳ ಕರ್ತವ್ಯ.

## ೨೮. ಸೆರೆಯಾಳು

ರಾಮಸುಂದರರನ್ನು ಹಿಡಿದು ಸರಕಾರ ಲಾಭವನ್ನೇನೂ ಕಟ್ಟಿಕೊಳ್ಳಲಿಲ್ಲ. ಅದಕ್ಕೆ ಬದಲು ಹಿಂದೀಯರ ಉತ್ಸಾಹ ಹೆಚ್ಚುತ್ತಿರುವುದು ಕಂಡುಬಂತು. ಏಸಿಯಾಟಿಕ್ ಡಿಪಾರ್ಟ್‌ಮೆಂಟಿನ ಅಧಿಕಾರಿಗಳು 'ಇಂಡಿಯನ್ ಒಪೀನಿಯನ್' ಪತ್ರಿಕೆಯನ್ನು ಬಹಳ ಸೂಕ್ಷ್ಮವಾಗಿ ಓದುತಿದ್ದರು. ಮುಚ್ಚುಮರೆಯೆಂಬುದು ನಮ್ಮ ಚಳುವಳಿಗೆ ಹೊರತಾದ ಮಾತು. ಆದ್ದರಿಂದ ಅಧಿಕಾರಿಗಳಿಗೆ ಈ ಪತ್ರಿಕೆ ನಮ್ಮ ಚಳುವಳಿಯ ರೀತಿ-ನೀತಿಗಳನ್ನು ಸರಿಯಾಗಿ ತೋರಿಸುವ ಕನ್ನಡಿಯಾಯಿತು. ಇದರಿಂದ ಅವರಿಗೆ ಕೆಲವೊಂದು ಮುಂದಾಳುಗಳು ಇರುವ ವರೆಗೆ ಈ ಚಳುವಳಿಯ ಬಲ ಕುಗ್ಗಿಸುವುದು ಸಾಧ್ಯವಿಲ್ಲವೆಂದು ತೋರಿತು. ಇದರ ಫಲವಾಗಿ, ಮ್ಯಾಜಿಸ್ಟ್ರೇಟರೆದುರು ಬಂದು ಹಾಜರಾಗಬೇಕೆಂದು ೧೯೦೭ನೆ ಕ್ರಿಸ್‌ಮಸ್ಸಿನಲ್ಲಿ ಕೆಲವು ಮುಂದಾಳುಗಳಿಗೆ ನೋಟೀಸು ಬಂತು! ರೆಜಿಸ್ಟ್ರೇಶನ್ನಿಗಾಗಿ ಅರ್ಜಿ ಕೊಡಲು ತಪ್ಪಿದುದರಿಂದ ಕಟ್ಟಳೆಗನುಸರಿಸಿ ತಮ್ಮನ್ನು ಟ್ರಾನ್ಸ್‌ವಾಲಿನಿಂದ ಒಂದು ನಿಶ್ಚಿತ ಅವಧಿಯಲ್ಲಿ ಏಕೆ ಹೊರಗೆ ಹಾಕಬಾರದು, ಎಂಬುದಾಗಿ ಹೊರಟ ಸರಕಾರದ ನೋಟೀಸಿಗೆ

ಉತ್ತರಕೊಡಲು ಈ ಎಲ್ಲ ಮುಂದಾಳುಗಳು ೧೯೦೭ನೆ ಡಿಸೆಂಬರ್ ೨೮ರಲ್ಲಿ ಮ್ಯಾಜಿಸ್ಟ್ರೇಟರಲ್ಲಿ ಹಾಜರಾದರು.

ಮ್ಯಾಜಿಸ್ಟ್ರೇಟರು ಪ್ರತಿಯೊಬ್ಬನ ಪ್ರಕರಣವನ್ನು ಬೇರೆ ಬೇರೆಯಾಗಿ ವಿಚಾರಣೆಮಾಡಿ ಎಲ್ಲ ಅಪರಾಧಿಗಳೂ ಟ್ರಾನ್ಸ್‌ವಾಲಿನ ಎಲ್ಲೆಯಿಂದ–ಕೆಲವರು ನಾಲ್ವತ್ತೆಂಟು ಗಂಟೆಗಳಲ್ಲಿ, ಕೆಲವರು ಏಳು ದಿನಗಳಲ್ಲಿ, ಇನ್ನೂ ಕೆಲವರು ೧೪ ದಿನಗಳಲ್ಲಿ—ಹೊರಗೆ ಹೊರಡಬೇಕೆಂದು ಆಜ್ಞೆ ಮಾಡಿದರು.

ಆ ಕಾಲಮಿತಿ ೧೯೦೮ನೆ ಜಾನೆವರಿ ೧೦ಕ್ಕೆ ಮುಗಿಯಿತು. ನಾವು ಆ ಅಪ್ಪಣೆ ಮುರಿದದ್ದರಿಂದ ಅನುಭವಿಸಬೇಕಾದ ಶಿಕ್ಷೆಯನ್ನು ತಿಳಿದುಕೊಳ್ಳಲು ನಮಗೆ ಕೋರ್ಟಿನಿಂದ ಅಂದೇ ಕರೆಬಂತು.

ಅಲ್ಲಿ ನಾವು ಯಾರೂ ವಾದಿಸಲಿಲ್ಲ. ಗೊತ್ತುಪಡಿಸಿದ ಅವಧಿಯಲ್ಲಿ ಟ್ರಾನ್ಸ್‌ವಾಲ್ ಬಿಟ್ಟು ಹೋಗಬೇಕೆಂಬ ಆಜ್ಞೆಯನ್ನು ಧಿಕ್ಕರಿಸಿದ್ದರಿಂದ ನಾವೆಲ್ಲರೂ ತಪ್ಪುಗಾರರೆಂದು ಒಪ್ಪಿಕೊಂಡೆವು.

ಮ್ಯಾಜಿಸ್ಟ್ರೇಟರು ಒಂದು ಚಿಕ್ಕ ಹೇಳಿಕೆ ಕೊಡಲು ನನಗೆ ಒಪ್ಪಿಗೆ ಕೊಟ್ಟಿದ್ದರು. ನನ್ನ ಆ ಹೇಳಿಕೆಯಲ್ಲಿ ಅತಿ ಹೆಚ್ಚಿನ ಶಿಕ್ಷೆ ಕೊಡಲು ಅವರಿಗೆ ಬಿನ್ನವಿಸಿಕೊಂಡಿದ್ದೆ. ಆದರೆ ಮ್ಯಾಜಿಸ್ಟ್ರೇಟರು ನನ್ನ ಬಿನ್ನಹಕ್ಕೆ ಮನ್ನಣೆ ಕೊಡದೆ ಎರಡು ತಿಂಗಳು ಸಾದಾಶಿಕ್ಷೆ ಮಾತ್ರ ವಿಧಿಸಿದರು. ವಕೀಲನಾಗಿ ಕೆಲಸ ನಡೆಸಿದ ನ್ಯಾಯಾಸ್ಥಾನದಲ್ಲಿಯೆ ಅಪರಾಧಿಯಾಗಬೇಕಾದ್ದರಿಂದ ನನಗೆ ಸ್ವಲ್ಪ ಸಂಕೋಚವೆನಿಸಿತು. ಆದರೆ, ಅದಕ್ಕಿಂತ ಇದೇ ಗೌರವದ ಕೆಲಸವೆಂದು ಯೋಚಿಸಿ ಅಪರಾಧಿಸ್ಥಾನದಲ್ಲಿ ನಿಲ್ಲಲು ಅಭಿಮಾನಪಟ್ಟದ್ದು ನನಗೆ ಚೆನ್ನಾಗಿ ನೆನಪಿದೆ.

ನ್ಯಾಯಾಸ್ಥಾನದಲ್ಲಿ ನೂರಾರು ಹಿಂದೀಯರು ಸೇರಿದ್ದರು. ಅನೇಕ ಸಹೋದ್ಯೋಗಿಗಳೂ ಇದ್ದರು. ತೀರ್ಪು ಹೇಳಿದೊಡನೆ ನನ್ನನ್ನು ಸೆರೆಮನೆಗೆ ಕರೆದೊಯ್ದರು. ಅಲ್ಲಿ ನಾನು ಏಕಾಕಿಯಾದೆ. ಪೋಲೀಸಿನವನು, ನನಗೆ ಸೆರೆಯಾಳುಗಳ ಬೆಂಚಿನ ಮೇಲೆ ಕುಳಿತುಕೊಳ್ಳಲು ಹೇಳಿ ಬಾಗಿಲು ಮುಚ್ಚಿ ಹೋಗಿಬಿಟ್ಟ. ನನಗೆ ಮನಸ್ಸಿಗೆ ಸ್ವಲ್ಪ ಕಳವಳವಾಗಿ ಆಲೋಚನಾ ಮಗ್ನನಾದೆ. ಮನೆ, ನಾನು ವಾದಿಸುತಿದ್ದ ನ್ಯಾಯಾಸ್ಥಾನ, ಸಾರ್ವಜನಿಕ ಸಭೆ, ಎಲ್ಲವೂ ಅದೊಂದು ಕನಸಿನಂತೆ ತೋರಿತು. ಈಗಲೋ ನಾನೊಬ್ಬ

ಸೆರೆಯಾಳು. ಎರಡು ತಿಂಗಳಲ್ಲಿ ಏನೇನು ನಡೆಯಬಹುದೊ? ನಾನು ಪೂರ್ಣ ಶಿಕ್ಷೆಯನ್ನೇ ಅನುಭವಿಸಬೇಕಾಗುವುದೆ? ಜನರು ತಮ್ಮ ವಚನದಂತೆ ಸೆರೆಮನೆ ಸೇರತೊಡಗಿದರೆ ಅದೇನೂ ಅಗತ್ಯವಿಲ್ಲ. ಹಾಗಿಲ್ಲದಿದ್ದರೆ ಮಾತ್ರ ಎರಡು ತಿಂಗಳು ನನಗೆ ಮಹಾಯುಗದಷ್ಟು ಬೇಸರವಾಗಬಹುದು. ನನ್ನ ಮನದಲ್ಲಿ ಈ ಎಲ್ಲ ಯೋಚನೆಗಳು ಕ್ಷಣಮಾತ್ರದಲ್ಲಿ ಮಿಂಚಿದುವು. ಇದರಿಂದ ನನಗೆ ತುಂಬಾ ನಾಚಿಕೆ ಎನಿಸಿತು. ನಾನು ಎಂತಹ ದುರಭಿಮಾನಿ! ಜನರಿಗೆ ಸೆರೆಮನೆಗಳೆಂದರೆ ನಮಗಾಗಿ ರಾಜನಿರ್ಮಿತ ಅತಿಥಿಗೃಹಗಳೆಂದು ಹೇಳಿದವನು ನಾನೇ! ಕರಾಳಶಾಸನವಿರೋಧದಿಂದ ಒದಗುವ ವಿಪತ್ತು ಪರಮ ಅನುಗ್ರಹವೆಂದು, ಆ ಶಾಸನವನ್ನು ಎದುರಿಸುವಾಗ ಸರ್ವಸ್ವವನ್ನೂ ತ್ಯಾಗಮಾಡುವುದು—ಪ್ರಾಣತ್ಯಾಗವೂ ಕೂಡ—ಆನಂದದ ಪರಮಾವಧಿ ಎಂದು ಹೇಳಿದವನು ನಾನೇ! ಇಂದು ನನ್ನ ಈ ಎಲ್ಲ ಜ್ಞಾನ ಎಲ್ಲಿ ಅಚ್ಚಳಿಯಿತು? ಈ ಎರಡನೆ ವಿಚಾರಸರಣಿ ನನಗೆ ಶಕ್ತಿವರ್ಧಕ ಔಷಧವಾಯಿತು. ನನ್ನ ಹುಚ್ಚಿಗೆ ನನಗೇ ನಗೆ ಬಂದಿತು. ಆಮೇಲೆ 'ನನ್ನ ಉಳಿದ ಸಂಗಡಿಗರಿಗೆ ಎಂತಹ ಶಿಕ್ಷೆಯಾಗಬಹುದು? ಅವರನ್ನು ನನ್ನ ಜೊತೆಯಲ್ಲೇ ಇಡಬಹುದೆ?' ಎಂದು ಯೋಚಿಸತೊಡಗಿದೆ. ಅಷ್ಟರಲ್ಲಿ ಒಬ್ಬ ಪೋಲೀಸ್ ಅಧಿಕಾರಿ ಬಂದು ಬಾಗಿಲು ತೆರೆದುದರಿಂದ ನನ್ನ ಈ ವಿಚಾರಲಹರಿ ಅಲ್ಲಿಗೇ ಚದುರಿಹೋಯಿತು. ಅವನು ಬಂದು ತನ್ನ ಹಿಂದೆ ಬರಲು ಹೇಳಿದ್ದರಿಂದ ನಾನು ಹಾಗೆಯೇ ಮಾಡಿದೆ. ಅಷ್ಟರಲ್ಲಿ ನಾನೇ ಅವನಿಗಿಂತ ಮುಂದೆ ಹೋಗುವಂತೆ ಮಾಡಿ ನನ್ನನ್ನು ಅವನು ಹಿಂಬಾಲಿಸಿದ. ಹಾಗೆಯೆ ನನ್ನನ್ನು ಸೆರೆಯಾಳುಗಳಿಗಾಗಿ ಸಿದ್ಧವಾಗಿದ್ದ, ಬಾಗಿಲು ಮುಚ್ಚಿದ ಬಂಡಿಗೆ ಕರೆದೊಯ್ದು ಅಲ್ಲಿ ಕುಳ್ಳಿರಹೇಳಿದ. ಅಲ್ಲಿಂದ ನನ್ನನ್ನು ನೇರವಾಗಿ ಜೋಹಾನ್ಸ್‌ಬರ್ಗ್ ಸೆರೆಮನೆಗೆ ಕರೆದೊಯ್ದರು.

ಸೆರೆಮನೆಯಲ್ಲಿ ಸ್ವಂತ ಉಡುಪನ್ನು ಬಿಚ್ಚಿಡಲು ಹೇಳಿದರು. ಅಧಿಕಾರಿಗಳು ನನ್ನ ಹೆಸರು, ವಿಳಾಸ, ಬರೆದುಕೊಂಡ ಮೇಲೆ ಒಂದು ದೊಡ್ಡ ಕೋಣೆಗೆ ಕರೆದೊಯ್ದರು. ಸ್ವಲ್ಪ ಹೊತ್ತಿನಲ್ಲಿ ನನ್ನ ದೇಶಬಾಂಧವರೆಲ್ಲ ಅಲ್ಲಿಗೆ ನಗುನಗುತ್ತಲೇ ಬಂದು ನನ್ನ ಜೊತೆಗೂಡಿದರು. ನನ್ನ ಶಿಕ್ಷೆಯೆ ಅವರಿಗೂ ದೊರೆತಿತ್ತು. ಅವರು ತಮ್ಮ ತಮ್ಮ ಶಿಕ್ಷೆಯ ವಿವರವನ್ನೂ ನಾನು ಹೊರಟು

ಬಂದ ಮೇಲೆ ನಡೆದ ಉಳಿದ ಸಂಗತಿಗಳನ್ನೂ ಬಣ್ಣಿಸಿ ಹೇಳಿದರು. ನಮ್ಮೆಲ್ಲರನ್ನು ಒಂದೇ ಸೆರೆಮನೆಯಲ್ಲಿ, ಒಂದೇ ಕೋಣೆಯಲ್ಲಿ, ಇಟ್ಟಿದ್ದರಿಂದ ನಮ್ಮ ಹಿಗ್ಗು ಹೇಳಲಾಸಲ್ಲ.

## ೨೯. ಸೆರೆಮನೆಯ ಮೊಟ್ಟಮೊದಲಿನ ಅನುಭವಗಳು

ಸಂಜೆ ಆರು ಗಂಟೆಗೆ ಸೆರೆಮನೆಯ ಬಾಗಿಲು ಮುಚ್ಚಿದರು. ಬಾಗಿಲು ಸರಳಿನದಲ್ಲ; ಆದರೆ ಬಹಳ ಗಟ್ಟಿಮುಟ್ಟು. ಗೋಡೆಗೆ ಅತಿ ಎತ್ತರದಲ್ಲಿ, ಗಾಳಿ ಬರಲು ಒಂದು ಸಣ್ಣ ಕಿಂಡಿ ಇತ್ತು. ಹೀಗೆ ನಮ್ಮನ್ನು ಬೀಗ ಹಾಕಿದ ಪೆಟ್ಟಿಗೆಯಲ್ಲಿಟ್ಟಂತೆ ತೋರಿತು.

ಎರಡು ಮೂರು ದಿನಗಳಲ್ಲಿ ಅನೇಕ ಜನ ಸತ್ಯಾಗ್ರಹಿ ಸೆರೆಯಾಳುಗಳು ಬರತೊಡಗಿದರು. ಅವರೆಲ್ಲ ಸ್ವಸಂತೋಷದಿಂದಲೇ ಸೆರೆಯಾದವರು. ಅವರಲ್ಲಿ ಬಹುಜನರು ಕೋರಿಗಳು— ಬೀದಿಯಲ್ಲಿ ಸಾಮಾನು ಮಾರುವವರು. ಆಗ ದಕ್ಷಿಣ ಆಫ್ರಿಕೆಯಲ್ಲಿ ಪ್ರತಿ ಒಬ್ಬ ಕೋರಿಯೂ, ಬಿಳಿಯನಿರಲಿ ಕರಿಯನಿರಲಿ, ಸಾಮಾನು ಹೊತ್ತು ಮಾರಲು ಸನದು ಪಡೆಯಲೇ ಬೇಕಾಗಿದ್ದಿತು. ಅದು ಯಾವಾಗಲೂ ಅವನ ಜೊತೆಯಲ್ಲಿಯೆ ಇರಬೇಕು. ಪೋಲೀಸರು ಕೇಳಿದೊಡನೆ ತೋರಿಸಬೇಕಾಗಿದ್ದಿತು. ಸಾಮಾನ್ಯವಾಗಿ ಈ ಕೋರಿಗಳಿಗೆಲ್ಲ ಪ್ರತಿದಿನವೂ ಸನದು ಕೇಳುತಿದ್ದರು; ಇಲ್ಲದವರನ್ನು ಸೆರೆಹಿಡಿಯುತಿದ್ದರು· ನಾವು ಸೆರೆಯಾದ ನಂತರ, ಹಿಂದೀ ಜನತೆಯೆಲ್ಲ ಸೆರೆಮನೆಯನ್ನು ತುಂಬಲು ನಿಶ್ಚಯ ಮಾಡಿತ್ತು. ಈ ನಿಶ್ಚಯದಲ್ಲಿ ಬೀದಿಯ ಈ ವ್ಯಾಪಾರಿಗಳು ಮುಂದಾಳುಗಳಾದರು. ಸೆರೆಯಾಗಬೇಕಾದರೆ ಅವರು ಕಷ್ಟಪಡಬೇಕಾಗಿರಲಿಲ್ಲ. ಸನದು ತೋರಿಸಲು ನಿರಾಕರಿಸಿದರೆ ಸಾಕು, ಸೆರೆಯಾಗುವುದು ನಿಶ್ಚಿತ. ಹೀಗೆ ಒಂದು ವಾರದಲ್ಲಿ ಸತ್ಯಾಗ್ರಹಿ ಸೆರೆಯಾಳುಗಳ ಸಂಖ್ಯೆ ನೂರನ್ನು ಮಿಕ್ಕಿತು. ಪ್ರತಿ ದಿನವೂ ಹೊಸ ಸೆರೆಯಾಳುಗಳು ಬರುತಿದ್ದುದರಿಂದ ಪತ್ರಿಕೆಗಳಿಲ್ಲದೆಯೆ ನಮಗೆ ಎಲ್ಲ ಸುದ್ದಿ ತಿಳಿಯುತಿದ್ದಿತು. ಸೆರೆಯಾಗುವ ಸತ್ಯಾಗ್ರಹಿಗಳ ಸಂಖ್ಯೆ ಹೆಚ್ಚಾದಂತೆ ಅವರಿಗೆ ಸಿಕ್ಕುವ ಶಿಕ್ಷೆಯೂ ಸಶ್ರಮವಾಗತೊಡಗಿತು.

ಸಶ್ರಮ ಶಿಕ್ಷೆಗೆ ಗುರಿಯಾಗದಿದ್ದವರಿಗೆ ಜೋಹಾನ್ಸ್‌ಬರ್ಗಿನಲ್ಲಿ ಬೆಳಿಗ್ಗೆ ಗಂಜಿ ಊಟ ಕೊಡುತಿದ್ದರು. ಅದಕ್ಕೆ ಉಪ್ಪು ಸೇರಿಸುತ್ತಿರಲಿಲ್ಲ; ಬೇರೆಯಾಗಿಯೆ ಕೊಡುತಿದ್ದರು ಮಧ್ಯಾಹ್ನದ ಊಟವೆಂದರೆ ಹತ್ತು ತೊಲೆಯಷ್ಟು ಅನ್ನ, ಅಷ್ಟೇ ರೊಟ್ಟಿ, ಎರಡುವರೆ ತೊಲೆ ತುಪ್ಪ, ಸ್ವಲ್ಪ ಉಪ್ಪು. ಸಂಜೆಗೆ ಗಂಜಿ, ಏನಾದರೂ ಕಾಯಿಪಲ್ಯ—ಮುಖ್ಯವಾಗಿ ಆಲು ಗಡ್ಡೆ, ದೊಡ್ಡದಾದರೆ ಒಂದು ಚಿಕ್ಕವಾದರೆ ಎರಡು. ಈ ಆಹಾರದಿಂದ ನಮಗೆ ಯಾರಿಗೂ ತೃಪ್ತಿಯಾಗಿರಲಿಲ್ಲ. ಅನ್ನವ್ರೋ ಅತಿ ಪೆತ್ತಗೆ. ವೈದ್ಯಕೀಯ ಅಧಿಕಾರಿಗಳನ್ನು 'ಹಿಂದುಸ್ಥಾನದ ಸೆರೆಮನೆಗಳಲ್ಲಿ ಚಟ್ಟಣಿಯೊ ಬೇರೆ ಮೇಲೋಗರವ್ರೊ ಕೊಡುವುದುಂಟೆಂದೂ ನಮಗೂ ಹಾಗೆಯೆ ಕೊಡಬೇಕೆಂದೂ' ಕೇಳಿದೆವು. 'ಇದು ಹಿಂದುಸ್ಥಾನವಲ್ಲ ಸೆರೆಮನೆಯಲ್ಲಿ ರುಚಿ ಅರುಚಿ ಎಂಬ ಪ್ರಶ್ನೆಯೆ ಏಳುವುದಿಲ್ಲ. ಆದ್ದರಿಂದ ಯಾವ ಮೇಲೋಗರ ಕೊಡುವುದೂ ಸಾಧ್ಯವಿಲ್ಲ' ಎಂದು ನಿಷ್ಠುರವಾಗಿ ಉತ್ತರ ಬಂತು. ಸರಕಾರದ ನಿಯಮದಂತೆ ಕೊಡಲಾಗುವ ಈ ಆಹಾರದಲ್ಲಿ ಮಾಂಸಖಂಡಗಳ ಬೆಳವಣಿಗೆಗೆ ಆಸ್ಪದವಿಲ್ಲದ್ದರಿಂದ ಬೇಳೆ ಕೊಡಬೇಕೆಂದು ಕೇಳಿದೆವು. ಅದಕ್ಕೆ 'ಸೆರೆಯಾಳುಗಳು ಆರೋಗ್ಯದ ವಿಷಯದಲ್ಲಿ ವಾದ ಹೂಡಕೂಡದು. ಮುಸುಕಿನ ಜೋಳದ ಬದಲು ವಾರಕ್ಕೆರಡು ಸಲ ಹುರುಳಿ ಕೊಡುವುದಿಲ್ಲವೆ? ಅದು ಮಾಂಸಖಂಡ ವರ್ಧಕವಲ್ಲದೆ ಮತ್ತೇನು?' ಎಂದರು. ಮಾನವ ದೇಹಕ್ಕೆ ವಾರಕ್ಕೆ ಒಂದು ಸಲವೊ ಎರಡು ವಾರಕ್ಕೆ ಒಂದು ಸಲವೊ ತೆಗೆದುಕೊಂಡ ಬೇರೆ ಬೇರೆ ಆಹಾರದ ಸತ್ವವನ್ನು ಹೀರಬಲ್ಲ ಶಕ್ತಿ ಇದ್ದುದಾದರೆ ವೈದ್ಯ ಮಹಾಶಯರ ಈ ವಾದ ಸರಿಯಾದುದು. ನಿಜವಾದ ಸಂಗತಿಯೆಂದರೆ ನಮಗೆ ಅನುಕೂಲತೆ ಮಾಡಿಕೊಡುವ ಇಚ್ಛೆ ಅವರಿಗಿರಲಿಲ್ಲ. ಸೆರೆಮನೆಯ ಮೇಲ್ವಿಚಾರಕರು ನಮಗೆ ಅಡುಗೆ ಮಾಡಿಕೊಳ್ಳಲು ಒಪ್ಪಿಗೆ ಕೊಟ್ಟರು. ಆದ್ದರಿಂದ ನಮ್ಮ ಅಡಿಗೆಯ ಕೆಲಸವನ್ನು ತಂಬಿ ನಾಯ್ಡುವಿಗೆ ಒಪ್ಪಿಸಿದೆವು. ನಮ್ಮ ಪರವಾಗಿ ಅವರು ಅನೇಕ ಸಲ ಹೋರಾಡಬೇಕಾಯಿತು. ಕಾಯಿಪಲ್ಯ ಕಡಿಮೆ ಕೊಟ್ಟಿದ್ದರೆ ಅವರು ಪಟ್ಟುಹಿಡಿದು ತಕ್ಕಷ್ಟು ತರುತಿದ್ದರು. ಕಾಯಿಪಲ್ಯ ಕೊಡುತಿದ್ದುದು ವಾರದಲ್ಲಿ ಎರಡು ದಿನ ಮಾತ್ರ. ಅಂದು ಎರಡು ಸಲ ಅಡಿಗೆ ಮಾಡುತಿದ್ದೆವು. ಉಳಿದ ದಿನಗಳಲ್ಲಿ ಒಮ್ಮೆ ಮಾತ್ರ. ಏಕೆಂದರೆ ಉಳಿದ ಪದಾರ್ಥಗಳನ್ನು ಮಧ್ಯಾಹ್ನ ಮಾತ್ರ ಅಡಲು ನಮಗೆ

ಅಪ್ಪಣೆ ಕೊಟ್ಟಿದ್ದರು. ಅಡಿಗೆ ಮಾಡತೊಡಗಿದ ಮೇಲೆ ನಮಗೆ ಸ್ವಲ್ಪ ನೆಮ್ಮದಿಯೆನಿಸಿತು.

ಈ ಎಲ್ಲ ಅನುಕೂಲತೆ ದೊರೆಯಲಿ ಬಿಡಲಿ, ಶಿಕ್ಷೆಯ ಸಂಪೂರ್ಣ ಅವಧಿಯನ್ನು ಸೆರೆಮನೆಯಲ್ಲಿ ಸುಖದಿಂದಲೂ ಶಾಂತಿಯಿಂದಲೂ ಕಳೆಯ ಬೇಕೆಂದು ಪ್ರತಿ ಒಬ್ಬರೂ ನಿಶ್ಚಯಿಸಿದೆವು. ಸತ್ಯಾಗ್ರಹಿ ಸೆರೆಯಾಳುಗಳ ಸಂಖ್ಯೆ ಮೆಲ್ಲಗೆ ೧೫೦ಕ್ಕೆ ಏರಿತು.

ಹೀಗೆ ಸುಮಾರು ೧೫ ದಿನ ಸಂದಿರಬಹುದು. ಅಷ್ಟರಲ್ಲಿ, ಹಿಂದೀಯ ರೊಡನೆ ಒಪ್ಪಂದ ಮಾಡಿಕೊಳ್ಳುವುದು ಸಾಧ್ಯವೇ, ಎಂದು ಸರಕಾರ ಯೋಚಿ ಸುತ್ತಿರುವುದಾಗಿ ಹೊಸ ಸತ್ಯಾಗ್ರಹಿಗಳು ಸುದ್ದಿ ತಂದರು. ಜನರಲ್ ಸ್ಮಟ್ಸ ರನ್ನು ಕಾಣಲು ನನಗೆ ಕರೆ ಬಂತು. 'ಸೆರೆಯಾಳುಗಳ ಬಿಡುಗಡೆ ಆಗಬೇಕು. ಸಾಕಷ್ಟು ಹಿಂದೀಯರು ಸ್ವೇಚ್ಛೆಯಿಂದ ರೆಜಿಸ್ಟರ್ ಮಾಡಿಸಿನರೆ ಸರಕಾರ ಕರಾಳ ಶಾಸನವನ್ನು ಹಿಂದೆಗೆದುಕೊಳ್ಳಬೇಕು' ಎಂದು ಮಧ್ಯಸ್ಥಿಕೆಯಾಯಿತು. ನಾನು ಸತ್ಯಾಗ್ರಹಿಯಾದ್ದರಿಂದ ಇಂತಹ ಒಪ್ಪಂದವನ್ನು ನಿರಾಕರಿಸುವುದು ಸಾಧ್ಯವಿರಲಿಲ್ಲ. ಈ ಒಪ್ಪಂದದ ಮೇರೆಗೆ ಎಲ್ಲ ಸೆರೆಯಾಳುಗಳ ಬಿಡುಗಡೆ ಯಾಯಿತು. ನಾನು ಒಪ್ಪಂದದ ಕರಾರುಗಳನ್ನು ನಮ್ಮ ಜನರಿಗೆ ವಿವರಿಸು ವುದರಲ್ಲಿ ತೊಡಗಿದೆ.

## ೩೦. ಒಂದು ಚಿರಸ್ಮರಣೀಯ ಪ್ರಸಂಗ —೧

ನಾನು ನೇರವಾಗಿ ಜೋಹಾನ್ಸಬರ್ಗಿಗೆ ಹೋದೆ. ಅಲ್ಲಿ ಅದೇ ರಾತ್ರಿ ಸುಮಾರು ೧೧-೧೨ ಗಂಟೆಗೆ ಒಂದು ಸಭೆ ಸೇರಿತು. ಸಭೆಯ ಪ್ರಕಟನೆ ತೀರ ತಡವಾಗಿ ಹೊರಟಿತ್ತು; ತಕ್ಕಷ್ಟು ಜನರಿಗೆ ಸರಿಯಾಗಿ ತಿಳಿದಿರಲಿಲ್ಲ. ಹೀಗಿ ದ್ದರೂ ಸುಮಾರು ಒಂದು ಸಾವಿರ ಜನ ಸೇರಿದ್ದರು. ಒಬ್ಬಿಬ್ಬ ಪಠಾಣರನ್ನು ಬಿಟ್ಟರೆ, ಈ ಸಭೆ ಈ ಒಪ್ಪಂದವನ್ನು ಒಮ್ಮತದಿಂದಲೇ ಅನುಮೋದಿಸಿತು. ಸ್ವ ಇಚ್ಛೆಯಿಂದಲೇ ಆಗಲಿ ಬೆರಳು ಗುರುತು ಕೊಡುವುದು ಸರಿಯಾದದ್ದು ಎಂಬುದನ್ನು ಪಠಾಣರಿಗೆ ಮನಗಾಣಿಸಿ ಕೊಡುವುದು ನಮ್ಮಿಂದ ಸಾಧ್ಯ ವಾಗಲಿಲ್ಲ.

೧೯೦೮ನೆ ಫೆಬ್ರುವರಿ ೧೦ ರ ಬೆಳಿಗ್ಗೆ ನಾವು ಕೆಲವರು ನೋಂದಣಿಯ ಸನದು (Certificate of Registration) ಪಡೆಯುವುದಕ್ಕೆ ಹೊರಡಲನುವಾದೆವು. ರೆಜಿಸ್ಟ್ರೇಶನ್ನಿನ ಈ ಕೆಲಸ ಆದಷ್ಟು ಬೇಗನೆ ಮುಗಿಸಬೇಕೆಂದು ಜನರಿಗೆ ತಿಳಿಸಲಾಗಿತ್ತು. ಜನರೊಳಗಿನ ಅನುಮಾನ ಕಳೆಯುವುದಕ್ಕೂ, ಸಂಬಂಧಿಸಿದ ಅಧಿಕಾರಿಗಳು ಗೌರವದಿಂದ ವರ್ತಿಸುವರೇ ಇಲ್ಲವೇ ಎಂದು ನೋಡುವುದಕ್ಕೂ, ಇದಲ್ಲದೆ ಸಾಮಾನ್ಯವಾಗಿ ಎಲ್ಲ ವ್ಯವಸ್ಥೆಯನ್ನು ಪರಿಶೀಲಿಸಲಿಕ್ಕೂ ಮುಂದಾಳುಗಳೆಲ್ಲರೂ ಮೊಟ್ಟಮೊದಲಿಗೇ ಸನದು ಪಡೆಯಬೇಕೆಂದು ನಿಶ್ಚಯವಾಗಿತ್ತು.

ನನ್ನ ಚಾವಡಿಗೆ ಹೋದಾಗ—ಸತ್ಯಾಗ್ರಹ ಸಮಿತಿಯ ಚಾವಡಿಯೂ ಅದೇ—ಮೀರ್ ಆಲಮ್ ಕೆಲವು ಗೆಳೆಯರೊಂದಿಗೆ ಹೊರ ಬಾಗಿಲಿನ ಹತ್ತಿರ ನಿಂತಿದ್ದನ್ನು ನೋಡಿದೆ. ಮೀರ್ ಆಲಂ ಒಬ್ಬ ಪಠಾಣ; ನನ್ನ ಹಳೆಯ ಕಕ್ಷಿಗಾರ. ತನ್ನ ಎಲ್ಲ ಕೆಲಸಗಳಲ್ಲಿಯೂ ಅವನು ನನ್ನ ಸಲಹೆ ಕೇಳುತ್ತಲಿದ್ದ. ಅವನು ಸರಿಯಾಗಿ ಆರು ಅಡಿ ಎತ್ತರದ ಆಳು. ಒಳ್ಳೇ ಭದ್ರವಾದ ಅಗಲವಾದ ಮೈಕಟ್ಟು. ಅವನು ಚಾವಡಿಯ ಒಳಗೆ ಬರದೆ ಹೊರಗೇ ನಿಂತದ್ದನ್ನು ನಾನು ನೋಡಿದ್ದು ಇದೇ ಮೊದಲ ಸಲ. ನನ್ನನ್ನು ನೋಡಿಯೂ ನಮಸ್ಕರಿಸದಿದ್ದುದೂ ಮೊದಲ ಸಲ. ಮೊದಲಿಗೆ ನಾನೇ ಅವನಿಗೆ ನಮಸ್ಕರಿಸಿದೆ; ಪ್ರತಿಯಾಗಿ ಅವನೂ ನಮಸ್ಕರಿಸಿದ. ಪದ್ಧತಿಯಂತೆ ‘ ಕ್ಷೇಮವೆ? ’ ಎಂದು ಕೇಳಿದೆ. ‘ ಕ್ಷೇಮವಾಗಿದ್ದೇನೆ ’ ಎಂದು ಅವನು ಹೇಳಿದಂತೆ ನನ್ನ ನೆನಪು. ಆದರೆ ಅವನ ಮುಖದ ಮೇಲೆ ಎಂದಿನ ಆ ಮುಗುಳುನಗೆ ಇರಲಿಲ್ಲ. ಆದರೆ ಆ ಕಿಡಿಗಣ್ಣುಗಳು ಅವನ ಮನಸ್ಸಿನ ಭಾವವನ್ನು ಸೂಚಿಸುತಿದ್ದುವು. ಆಗ, ಏನೊ ಒಂದು ವಿಶೇಷಘಟನೆ ನಡೆಯಬಹುದೆಂದು ತೋರಿತು. ಅಂತೂ ಚಾವಡಿಯೊಳಗೆ ಹೋದೆ. ಅಧ್ಯಕ್ಷರಾದ ಶ್ರೀ. ಇಸೂಪ್ ಮಿಯ್ಯಾ ಮತ್ತು ಇತರ ಸ್ನೇಹಿತರು ಬಂದೊಡನೆ ಎಲ್ಲರೂ ಏಶಿಯಾಟಿಕ್ ಕಚೇರಿಗೆ ಹೋದೆವು. ಮೀರ್ ಆಲಂ ಮತ್ತು ಅವನ ಸಂಗಡಿಗರು ನಮ್ಮನ್ನು ಹಿಂಬಾಲಿಸಿದರು.

ರೆಜಿಸ್ಟ್ರೇಶನ್ ಕಚೇರಿ ಇದ್ದುದು ವಾನ್ ಬ್ರಾಂಡಿಸ್ ಚೌಕಿನಲ್ಲಿ. ನನ್ನ ಚಾವಡಿಯಿಂದ ಅಲ್ಲಿಗೆ ಒಂದು ಮೈಲಿಗಿಂತಲೂ ಕಡಿಮೆ. ಅಲ್ಲಿಗೆ ದೊಡ್ಡ ಬೀದಿಗಳಿಂದಲೇ ಹೋಗಬೇಕು. ನಾವು ವಾನ್ ಬ್ರಾಂಡಿಸ್ ಬೀದಿಯಲ್ಲಿ,

ಆರ್ನಾಟ್ ಮತ್ತು ಗಿಬ್ಸನ್ ಅವರ ಅಂಗಡಿಯ ಬದಿಯಿಂದ ಹೋಗುತ್ತಲಿದ್ದೆವು. ಕಚೇರಿಗೆ ಮೂರು ನಿಮಿಷದ ಹಾದಿಯೂ ಇರಲಿಲ್ಲ. ಅಷ್ಟರಲ್ಲಿ ಮೀರ್ ಆಲಂ ನನ್ನನ್ನು ಕರೆದು 'ಎಲ್ಲಿಗೆ ಹೋಗುತ್ತೀರಿ' ಎಂದು ಕೇಳಿದ.

"ನನಗೆ ಹತ್ತೂ ಬೆರಳಿನ ಗುರುತುಕೊಟ್ಟು ಸನದು ಪಡೆಯುವ ಇಚ್ಛೆ ಇದೆ. ನನ್ನೊಂದಿಗೆ ಬಂದರೆ ಮೊದಲು ನಿನಗೆ ಎರಡು ಹೆಬ್ಬೆಟ್ಟಿನ ಗುರುತಿನಿಂದಲೇ ಸನದು ದೊರಕಿಸಿಕೊಟ್ಟು ನಾನು ಆಮೇಲೆ ಪಡೆಯುತ್ತೇನೆ."

ನನ್ನ ಮಾತು ಮುಗಿಯುವಷ್ಟರಲ್ಲಿ, ನನ್ನ ತಲೆಗೆ ಹಿಂದಿನಿಂದ ದೊಣ್ಣೆಯ ಪೆಟ್ಟೊಂದು ಬಿತ್ತು. ನಾನು 'ಹೇ ರಾಮ' ಎನ್ನುತ್ತ ನೆಲದ ಮೇಲೆ ಬೋರಲು ಬಿದ್ದುಬಿಟ್ಟೆ. ಮುಂದೆ ಏನು ನಡೆಯಿತೆಂಬುದು ನನಗೆ ಗೊತ್ತಾಗಲಿಲ್ಲ. ಮೀರ್ ಆಲಂ ಮತ್ತು ಅವನ ಸಂಗಡಿಗರು ಮಾತ್ರ ನನಗೆ ಇನ್ನೂ ಹೊಡೆಯುತ್ತಲೇ ಇದ್ದರು. ಈ ಗದ್ದಲದಿಂದ, ಹಾದಿಹೋಕರಾದ ಕೆಲವು ಐರೋಪ್ಯರು ಒಟ್ಟುಗೂಡಿದರು. ಮೀರ್ ಆಲಂ ಮತ್ತು ಸಂಗಡಿಗರು ಓಡತೊಡಗಿದರು. ಆದರೆ ಐರೋಪ್ಯರು ಅವರಿಗೆ ಓಡಗೊಡಲಿಲ್ಲ. ಅಷ್ಟರಲ್ಲಿ ಪೋಲೀಸರು ಅಲ್ಲಿಗೆ ಬಂದು ಅವರನ್ನು ವಶಪಡಿಸಿಕೊಂಡರು. ನನ್ನನ್ನು ಹೊತ್ತುತಂದು ಶ್ರೀ. ಜೆ. ಸಿ. ಗಿಬ್ಸನ್ ಅವರ ಕೋಣೆಯಲ್ಲಿ ಮಲಗಿಸಿದರು. ನನಗೆ ಎಚ್ಚರವಾದಾಗ ಸ್ನೇಹಿತರಾದ ಡೋಕರು ನನ್ನ ಹತ್ತಿರ ಬಾಗಿ 'ಈಗ ಹೇಗಿದ್ದೀರಿ?' ಎಂದು ಕೇಳಿದರು.

"ಈಗ ಸರಿಯಾಗಿದ್ದೇನೆ. ಹಲ್ಲು, ಪಕ್ಕೆಲುಬು, ನೋಯುತ್ತಿವೆ. ಮೀರ್ ಆಲಂ ಎಲ್ಲಿದ್ದಾನೆ?" ಎಂದೆ ನಾನು.

"ಅವನನ್ನು ಸಂಗಡಿಗರೊಂದಿಗೆ ಸೆರೆಹಿಡಿದರು."

"ಅವರ ಬಿಡುಗಡೆ ಆಗಲೇ ಬೇಕಲ್ಲ?" ನಾನು ಕೇಳಿದೆ.

"ಅದೆಲ್ಲ ಸರಿ. ಆದರೆ ಈಗ ನೀವಿರುವುದು ಪರಕೀಯರಲ್ಲಿ. ನಿಮ್ಮ ತುಟಿ, ಕೆನ್ನೆಗಳಿಗೆ ದೊಡ್ಡ ಗಾಯವಾಗಿದೆ. ಪೋಲೀಸರೇನೊ ನಿಮ್ಮನ್ನು ಆಸ್ಪತ್ರೆಗೆ ಕರೆದೊಯ್ಯಲು ಸಿದ್ಧರಿದ್ದಾರೆ. ಆದರೆ ನಮ್ಮಲ್ಲಿಗೆ ಬಂದರೆ ನಾನೂ ನನ್ನ ಹೆಂಡತಿಯೂ ಕೈಲಾದ ಮಟ್ಟಿಗೆ ನಿಮ್ಮ ಆರೈಕೆ ಮಾಡುತ್ತೇವೆ."

"ಹೌದು, ನಾನೀಗ ನಿಮ್ಮ ಮನೆಗೆ ಬರುವುದೇ ಯೋಗ್ಯ. ಆಸ್ಪತ್ರೆಗೆ

ಬರಲು ಕರೆದುದಕ್ಕಾಗಿ ಪೋಲೀಸರಿಗೆ ಕೃತಜ್ಞನಾಗಿದ್ದೇನೆಂದೂ ಆದರೆ ನಾನು ನಿಮ್ಮ ಮನೆಗೇ ಹೋಗಬಯಸುವೆನೆಂದೂ ಅವರಿಗೆ ತಿಳಿಸಿರಿ.''

ಅಷ್ಟರಲ್ಲಿ ಏಶಿಯಾಟಿಕ್ ಇಲಾಖೆಯ ರೆಜಿಸ್ಟ್ರಾರ್ ಶ್ರೀ. ಚಾಮ್ನೆಯವರು ಅಲ್ಲಿಗೆ ಬಂದರು. ನನ್ನನ್ನು ಬಂಡಿಯಲ್ಲಿ ಶ್ರೀ. ಡೋಕ್ ಅವರ ಮನೆಗೆ ಕರೆದೊಯ್ದರು. ಈ ಶಿಷ್ಟ ಪಾದ್ರಿಗಳ ಮನೆ ಸ್ಮಿತ್ ಬೀದಿಯಲ್ಲಿತ್ತು. ಅಲ್ಲಿಗೆ ಒಬ್ಬ ವೈದ್ಯರೂ ಬಂದರು. ಶ್ರೀ. ಚಾಮ್ನೆಯವರು ಅದಕ್ಕೂ ಮೊದಲು ಬಂದಿದ್ದರು. ಅವರಿಗೆ ನಾನು 'ನಿಮ್ಮ ಕಚೇರಿಗೆ ಬಂದು ಹತ್ತೂ ಬೆರಳಿನ ಗುರುತು ಕೊಟ್ಟು ಮೊದಲ ಸನದು ನಾನೇ ಪಡೆಯುವ ಬಯಕೆ ಇತ್ತು. ಆದರೆ ದೇವರ ಇಚ್ಛೆ ಬೇರೆ. ಆದದ್ದು ಆಗಿ ಹೋಯಿತು. ದಯವಿಟ್ಟು ಅವಶ್ಯವಿದ್ದ ಕಾಗದಪತ್ರಗಳನ್ನು ಇಲ್ಲಿಗೇ ತಂದು ನನ್ನ ಹೆಸರನ್ನು ಕೂಡಲೇ ರೆಜಿಸ್ಟರ್ ಮಾಡಿಸಬೇಕು ನನಗಿಂತ ಮೊದಲು ಯಾರಿಗೂ ರೆಜಿಸ್ಟರ್ ಮಾಡಗೊಡಲಾರಿರೆಂದು ನಂಬಿದ್ದೇನೆ' ಎಂದು ಕೇಳಿಕೊಂಡೆ.

''ಅದಕ್ಕೇಕೆ ಇಷ್ಟು ಅವಸರ? ವೈದ್ಯರು ಈಗ ಬರುತ್ತಾರೆ. ನೀವು ದಯವಿಟ್ಟು ಸ್ವಲ್ಪ ವಿಶ್ರಾಂತಿ ಪಡೆಯಿರಿ. ಎಲ್ಲವೂ ಸರಿಹೋಗುವುದು. ಉಳಿದವರಿಗೆ ಸನದುಗಳನ್ನೇನೊ ಕೊಡುತ್ತಿರುತ್ತೇನೆ. ನಿಮ್ಮ ಹೆಸರು ಮಾತ್ರ ಮೊಟ್ಟಮೊದಲಿಗೇ ಬರೆದಿಡುತ್ತೇನೆ" ಎಂದರವರು.

"ಅದು ಕೂಡದು. ನಾನು ಬದುಕಿದ್ದು, ದೇವರ ದಯೆ ಇದ್ದರೆ ಮೊದಲ ಸನದು ನಾನೇ ಪಡೆಯಬೇಕೆಂದು ನನ್ನ ಸಂಕಲ್ಪ. ಆದ್ದರಿಂದ ಕಾಗದಪತ್ರಗಳನ್ನು ಈಗಲೇ ಇಲ್ಲಿಗೆ ತರಬೇಕೆಂದು ನನ್ನ ಕೋರಿಕೆ."

ಶ್ರೀ. ಚಾಮ್ನೆಯವರು ಕೂಡಲೇ ಅಲ್ಲಿಗೆ ಕಾಗದಪತ್ರಗಳನ್ನು ತಂದರು.

ಕೂಡಲೇ ಆಗಬೇಕಾಗಿದ್ದ ನನ್ನ ಇನ್ನೊಂದು ಕೆಲಸ ಉಳಿಯಿತು. 'ನನ್ನ ಮೇಲೆ ಏರಿ ಬಂದ ಮೀರ್ ಆಲಂ ಮತ್ತು ಇತರರು ಅಪರಾಧಿಗಳೆಂದು ನಾನು ತಿಳಿಯುವುದಿಲ್ಲ. ಅವರನ್ನು ವಿಚಾರಣೆಗೆ ಗುರಿ ಮಾಡುವ ಇಚ್ಛೆ ನನಗೆ ಇಲ್ಲವೇ ಇಲ್ಲ. ಆದ್ದರಿಂದ ನನಗಾಗಿ ಅವರೆಲ್ಲರ ಬಿಡುಗಡೆಯಾಗಬೇಕು' ಎಂದು ಸರಕಾರದ ವಕೀಲರಿಗೆ ತಂತಿಯಿಂದ ತಿಳಿಸುವುದೇ ಈ ಕೆಲಸ. ಈ ತಂತಿಯ ಪರಿಣಾಮವಾಗಿ ಅವರೆಲ್ಲರ ಬಿಡುಗಡೆಯಾಯಿತು.

ಆದರೆ ಜೋಹಾನ್ಸ್‌ಬರ್ಗಿನ ಐರೋಪ್ಯರು ಸರಕಾರದ ವಕೀಲರಿಗೆ 'ಕೇಡಿಗಳಿಗೆ ವಿಧಿಸಬೇಕಾದ ಶಿಕ್ಷೆಯ ವಿಷಯದಲ್ಲಿ ಗಾಂಧಿಯ ಅಭಿಪ್ರಾಯ ಏನೇ ಇರಲಿ. ಈ ಅಭಿಪ್ರಾಯಗಳಿಗೆ ದಕ್ಷಿಣ ಆಫ್ರಿಕೆಯಲ್ಲಿ ಮನ್ನಣೆ ಸಿಗಕೂಡದು. ಗಾಂಧಿಯೇನೋ ಅಪರಾಧಿಗಳನ್ನು ಕ್ಷಮಿಸಿ ಬಿಡಬಹುದು. ಆದರೆ ಅಪರಾಧ ನಡೆದುದು ರಾಜಮಾರ್ಗದಲ್ಲಿಯೇ ಹೊರತು ಖಾಸಗಿ ಸ್ಥಳದಲ್ಲಿ ಅಲ್ಲ. ಆದ್ದರಿಂದ ಇದು ಸಾರ್ವಜನಿಕರಿಗೆ ಸಂಬಂಧಿಸಿದ್ದು. ಈ ಅಕೃತ್ಯ ನಡೆದ ವಿಷಯದಲ್ಲಿ ಅನೇಕ ಇಂಗ್ಲಿಷ್ ಸದ್ಗೃಹಸ್ಥರೂ ಸಾಕ್ಷ್ಯ ಕೊಡಲು ಸಿದ್ಧರಿದ್ದಾರೆ. ಆದ್ದರಿಂದ ಅಪರಾಧಿಗಳ ವಿಚಾರಣೆ ನಡೆಯಲೇಬೇಕು' ಎಂದು ತೀಕ್ಷ್ಣವಾದ ಕಾಗದ ಬರೆದರು. ಆದ್ದರಿಂದ ಮೀರ್ ಆಲಮ್‌ನನ್ನೂ ಇನ್ನೊಬ್ಬನನ್ನೂ ಮರಳಿ ಸೆರೆಹಿಡಿದರು. ಅವರಿಗೆ ಮೂರು ತಿಂಗಳು ಸಶ್ರಮ ಶಿಕ್ಷೆಯಾಯಿತು. ನನ್ನನ್ನು ಮಾತ್ರ ಸಾಕ್ಷಿಗೆ ಕರೆಯಲಿಲ್ಲ.

## ೩೧. ಒಂದು ಚಿರಸ್ಮರಣೀಯ ಪ್ರಸಂಗ—೨

ಇನ್ನು ನನ್ನ ಆರೈಕೆಯ ಕಡೆಗೆ ತಿರುಗೋಣ. ಕಾಗದಪತ್ರಗಳನ್ನು ತರಹೋದ ಚಾಮ್ನೆಯವರು ಹಿಂದಿರುಗುವ ಮೊದಲೇ ಡಾ. ತ್ವಯ್ಟೆ ಬಂದರು. ಅವರು ನನ್ನನ್ನು ಚೆನ್ನಾಗಿ ಪರೀಕ್ಷಿಸಿ ಮೇಲ್ದುಟಿಯ ಗಾಯ ಹೊಲಿದರು; ಪಕ್ಕೆಲುಬಿಗೆ ಸವರಲು ಔಷಧ ಕೊಟ್ಟರು. ಮತ್ತು ತುಟಿಯ ಹೊಲಿಗೆ ಬಿಚ್ಚುವ ವರೆಗೆ ಮಾತನಾಡಕೂಡದೆಂದು ಕಟ್ಟಪ್ಪಣೆ ಮಾಡಿದರು.

ಹೀಗೆ ನನಗೆ ಮಾತಿಗೆ ನಿರ್ಬಂಧವಿದ್ದರೂ ಕೈಗಳಿಗೆ ಸ್ವಾತಂತ್ರ್ಯ ತಪ್ಪಿರಲಿಲ್ಲ. ಆದ್ದರಿಂದ ಅಲ್ಲಿಯ ನಮ್ಮ ಭಾರತೀಯ ಜನತೆಗೆ ಅಧ್ಯಕ್ಷರ ಮೂಲಕ ಒಂದು ಚಿಕ್ಕ ಹೇಳಿಕೆ ಬರೆದು ಕೊಟ್ಟು ಅದನ್ನು ಪ್ರಕಟನೆಗಾಗಿ ಕಳಿಸಿದೆ :—

"ಡೋಕ್ ದಂಪತಿಗಳ ವಾತ್ಸಲ್ಯಪೂರ್ಣ ಆರೈಕೆಯಲ್ಲಿ ನಾನು ಸುಖವಾಗಿದ್ದೇನೆ. ನನಗೆ ಕೆಲಸ ಮಾಡುವ ಚೈತನ್ಯ ಬೇಗ ಬರುವುದೆಂದು ನನ್ನ ನಂಬುಗೆ. ಈ ಸಲ್ಲದ ಕೆಲಸ ಮಾಡಿದವರಿಗೆ ತಾವು ಏನು ಮಾಡುತ್ತಿರುವೆವೆಂಬುದೆ ಗೊತ್ತಿರಲಿಲ್ಲ. ನಾನು ಹಿಡಿದ ಹಾದಿ ತಪ್ಪೆಂದು ಅವರು ತಿಳಿದರು.

ಅದರ ಪ್ರತಿಕ್ರಿಯೆಯನ್ನು ತಮಗೆ ಗೊತ್ತಿದ್ದ ರೀತಿಯಿಂದಲೇ ಮಾಡಿದರು. ಆದ್ದರಿಂದ ಅವರ ಮೇಲೆ ಯಾರೂ ಯಾವ ಪ್ರತಿಕಾರವನ್ನೂ ಮಾಡಬಾರದೆಂದು ಬೇಡಿಕೊಳ್ಳುತ್ತೇನೆ. ಈ ಕೃತ್ಯ ಮಾಡಿದವರು ಮುಸಲ್ಮಾನರೆಂದು ತಿಳಿದು ಹಿಂದೂಗಳು ಉದ್ರೇಕಗೊಳ್ಳಬಹುದು. ಇದರಿಂದ ಪ್ರಪಂಚದಲ್ಲಿ, ದೇವರೆದುರು, ಅವರು ತಪ್ಪುಗಾರರಾಗುತ್ತಾರೆ. ಇಂದು ಚೆಮ್ಮಿದ ನನ್ನ ಈ ನೆತ್ತರು ಎರಡೂ ಪಂಗಡಗಳನ್ನು ಚೆನ್ನಾಗಿ ಬೆಸಿಯಲಿ—ಇದೇ ನನ್ನ ಹೃತ್ಪೂರ್ವಕ ಪ್ರಾರ್ಥನೆ. ದೇವರು ಇದನ್ನು ಸಲ್ಲಿಸಲಿ. ಈ ಅತ್ಯಾಚಾರದಿಂದ ನನ್ನ ಅಭಿಪ್ರಾಯದಲ್ಲಿ ಬದಲಾವಣೆ ಆಗಿಲ್ಲ. ಏಶಿಯನ್ನರಲ್ಲಿ ಬಹಳ ಜನರು ಬೆರಳು ಗುರುತು ಕೊಡಬೇಕಾಗಿತ್ತು. ನಿಜವಾದ ಧಾರ್ಮಿಕ ವಿರೋಧ ವಿದ್ದವರಿಗೆ ಸರಕಾರ ಹೊರತುಪಡಿಸುತ್ತದೆ. ಇದಕ್ಕೂ ಹೆಚ್ಚು ರಿಯಾಯಿತಿ ಕೇಳುವುದು ಹುಡುಗಾಟವೇ ಸರಿ. ಜನತೆ ದೇವರ ಹೊರತಾಗಿ ಯಾರಿಗೂ ಹೆದರದಂತೆ ಮಾಡುವುದು ಸತ್ಯಾಗ್ರಹವನ್ನು ಸರಿಯಾಗಿ ತಿಳಿದುಕೊಂಡವರ ಕೆಲಸ. ಆದ್ದರಿಂದ ಸ್ಥಿರಬುದ್ಧಿಯ ಹಿಂದೀಯರು ಕರ್ತವ್ಯಪರಾನ್ಮುಖರಾಗ ಬಾರದು. ನಾವೇ ಸಂತೋಷದಿಂದ ಸನದು ಪಡೆದರೆ ಆ ಕಟ್ಟಳೆಯನ್ನು ಹಿಂದೆಗೆದುಕೊಳ್ಳುವುದಾಗಿ ಆಶ್ವಾಸನ ಸಿಕ್ಕಿದೆ. ಆದ್ದರಿಂದ ಸರಕಾರಕ್ಕೂ ವಲಸೆ ರಾಷ್ಟ್ರಕ್ಕೂ (colony) ನೆರವಾಗುವುದು ಪ್ರತಿ ಒಬ್ಬ ಯೋಗ್ಯ ಹಿಂದೀಯನ ಕರ್ತವ್ಯ."

ಶ್ರೀ. ಚಾಮ್ನೆಯವರು ಕಾಗದಪತ್ರಗಳನ್ನು ತಂದರು. ನಾನು ತೀರ ಅಶಕ್ತನಾಗಿದ್ದರೂ ಹೇಗೋ ಬೆರಳಿನ ಗುರುತು ಕೊಟ್ಟೆ. ಆಗ ಚಾಮ್ನೆ ಯವರ ಕಣ್ಣು ನೀರಿನಲ್ಲಿ ತೇಲುತಿದ್ದುದನ್ನು ಕಂಡೆ. ನಾನು ಅವರನ್ನು ಎಷ್ಟೋ ಸಲ ಕಟುವಾಗಿ ಟೀಕಿಸಿದ್ದೆ. ಆದರೆ ಸನ್ನಿವೇಶಗಳು ಮಾನವಹೃದಯ ವನ್ನು ಹೇಗೆ ಮಿದುವಾಗಿಸುವುವೆಂಬುದು ನನಗೆ ಇಂದು ತಿಳಿಯಿತು.

ನಾನು ಸಂಪೂರ್ಣ ಶಾಂತನಾಗಿರಬೇಕೆಂದು, ವಿಶ್ರಾಂತಿ ತೆಗೆದುಕೊಳ್ಳುತ್ತಿರಬೇಕೆಂದು, ಡೋಕ್ ದಂಪತಿಗಳು ಬಯಸುತಿದ್ದರು. ಆದ್ದರಿಂದ ನನ್ನ ಈ ಮಾನಸಿಕ ಶ್ರಮಕ್ಕಾಗಿ ಅವರು ಬಹಳ ವ್ಯಥೆ ಪಡುತಿದ್ದರು. ನನ್ನ ಆರೋಗ್ಯ ಇಷ್ಟರಿಂದಲೇ ಕೆಡಬಹುದೆಂದು ಅವರು ದಿಗಿಲುಗೊಂಡರು. ಅದಕ್ಕಾಗಿ ನನ್ನ ಬಳಿ ಇದ್ದ ಎಲ್ಲ ಜನರನ್ನು ನೊಲ್ಲಗೆ ಹೊರಗೆ ಕಳಿಸಿ ನಾನು

ಬರೆಯಕೂಡದು, ಏನನ್ನೂ ಮಾಡಕೂಡದು, ಎಂದು ತಿಳಿಸಿದರು. ನಾನು ಅವರಿಗೆ "ನನಗೆ ವಿಶ್ರಾಂತಿ ದೊರಕಿಸುವುದಕ್ಕಾಗಿ ನಿಮ್ಮ ಮಗಳು ಓಲಿವ್ 'ಕರುಣಾಳು ಬಾ ಬೆಳಕೆ' ಎಂಬ ನನ್ನ ಅಚ್ಚುಮೆಚ್ಚಿನ ಇಂಗ್ಲಿಷ್ ಹಾಡು ಹಾಡಿದರೆ ಬಹಳ ಸಂತೋಷ" ಎಂದು ಬರೆದು ತಿಳಿಸಿದೆ. ಓಲಿವ್ ಆಗ ಇನ್ನೂ ಚಿಕ್ಕ ಹುಡಿಗೆ ಶ್ರೀ. ಡೋಕರು ನನ್ನ ಬೇಡಿಕೆಗೆ ಸಂತೋಷದಿಂದ ಒಪ್ಪಿದರು. ಓಲಿವ್ ಕಳ್ಳಾಟಿಕೆಯಿಂದ ಬಾಗಿಲು ಬಳಿ ನಿಂತು ಮೆಲುದನಿಯಿಂದ ಹಾಡುತ್ತಿರುವ ನೋಟ ಈಗಲೂ ನನ್ನ ಕಣ್ಣೆದುರು ಕಟ್ಟಿದಂತಿದೆ; ಚಿಕ್ಕ ಓಲಿವ್ಳ ಇನಿದನಿ ಕಿವಿಯಲ್ಲಿ ಇನ್ನೂ ಮೊಳಗುತ್ತಿದೆ.

## ೩೨. ಪುನಃ ಸತ್ಯಾಗ್ರಹ

ಟ್ರಾನ್ಸ್ವಾಲ್ ಸರಕಾರದ ಸಮಾಧಾನಕ್ಕಾಗಿ ಹಿಂದೀಯರು ಸ್ವೇಚ್ಛೆಯಿಂದ ಹೇಗೆ ಸನದು ಪಡೆದರೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ನೋಡಿದ್ದಾಯಿತು. ಈಗ ಸರಕಾರ ಕರಾಳ ಶಾಸನವನ್ನು ಒಂದೆಗೆದುಕೊಳ್ಳಬೇಕಾಗಿತ್ತು. ಹಾಗೆ ಮಾಡಿದ್ದರೆ ನಮ್ಮ ಸತ್ಯಾಗ್ರಹ ಹೋರಾಟ ಕೊನೆಗೊಳ್ಳಬಹುದಾಗಿದ್ದಿತು ಆದರೆ ಅದರ ಬದಲು ಜನರಲ್ ಸ್ಮಟ್ಸ್ ಇನ್ನೊಂದು ಹೆಜ್ಜೆ ಮುಂದೆ ನಡೆದ. ಅವನು ಹಿಂದಿನ ಕಟ್ಟಳೆಯನ್ನು ಹಾಗೆಯೆ ಇಟ್ಟು ಶಾಸನ ಸಭೆಯಲ್ಲಿ 'ಸ್ವಯಂಪ್ರೇರಣೆಯಿಂದ ಮಾಡಿಸಿಕೊಂಡ ಎಲ್ಲ ರೆಜಿಸ್ಟ್ರೇಶನ್‌ಗಳೂ ಶಾಸನ ಸಮ್ಮತವೆಂದು ತಿಳಿಯಬೇಕೆಂದೂ ಉಳಿದ ಏಶಿಯನ್ನರೂ ರೆಜಿಸ್ಟರ್ ಮಾಡಿಸಿಕೊಳ್ಳಬೇಕೆಂದೂ' ಒಂದು ಹೊಸ ಶಾಸನವನ್ನೇ ತಂದ. ಈ ಮಸೂದೆಯನ್ನು ಓದಿ ನನಗೆ ದಿಗ್ಭ್ರಮೆಯಾಯಿತು.

ಈ ವಿಷಯದಲ್ಲಿ ಜನರಲ್ ಸ್ಮಟ್ಸನಿಗೆ ಒಂದು ಕಾಗದ ಬರೆದೆ. ಆದರೆ ರಾಜತಂತ್ರಜ್ಞರು ತೊಡಕಿನ ಪ್ರಶ್ನೆಗಳಿಗೆ ಉತ್ತರಕೊಡುವುದಿಲ್ಲ; ಕೊಟ್ಟರೂ ಸಂದಿಗ್ಧವಾಗಿ, ನುಣುಚಿಕೊಳ್ಳಲು ಆಸ್ಪದವಿರುವಂತೆ.

ಆದ್ದರಿಂದ ಟ್ರಾನ್ಸ್ವಾಲ್ ಸರಕಾರಕ್ಕೆ ಈ ರೀತಿಯ ಸ್ಪಷ್ಟವಾದ ಕಾಗದ ಬರೆದೆವು:–'ಒಪ್ಪಂದದಂತೆ ಏಶಿಯಾಟಿಕ್ ಶಾಸನವನ್ನು ಕೊನೆಗೊಳಿಸದಿದ್ದರೆ, ಮತ್ತು ಈ ವಿಷಯದಲ್ಲಿ ಹಿಂದೀಯರಿಗೆ ಸರಕಾರ ತನ್ನ ನಿರ್ಣಯ

ವನ್ನು ನಿರ್ದಿಷ್ಟವಾದ ದಿನದೊಳಗೆ ತಿಳಿಸದಿದ್ದರೆ, ಭಾರತೀಯರಾದ ನಾವು ಪಡೆದ ಎಲ್ಲ ಸನದುಗಳನ್ನು ಸುಟ್ಟು ಹಾಕುವೆವು. ಮತ್ತು ಅದರಿಂದ ಉಂಟಾದ ಪರಿಸ್ಥಿತಿಯನ್ನು ನಮ್ರವಾಗಿ ಆದರೆ ಬಲವಾಗಿ ವಿರೋಧಿಸುವೆವು.'

ನಾವು ಕೊಟ್ಟ ನಿರ್ದಿಷ್ಟ ಅವಧಿ ಶಾಸನ ಸಭೆಯಲ್ಲಿ ಹೊಸ ಏಶಿಯಾಟಿಕ್ ಕಟ್ಟಳೆ ಚರ್ಚೆಯಾಗುವ ದಿನವೇ ಮುಗಿಯುತಿದ್ದಿತು. ಈ ಅವಧಿ ಮುಗಿದ ಎರಡು ಗಂಟೆಯ ಮೇಲೆ, ಸನದುಗಳ ಬಹಿರಂಗ ದಹನಕ್ರಿಯೆಗಾಗಿ ಸಭೆಯೊಂದು ಜರಗುವುದಿದ್ದಿತು. ನಿಷೇಧ ಸೂಚನೆ ಈ ಸಭೆಯ ಈಗಿನ ಉದ್ದೇಶ. ಒಂದು ವೇಳೆ ಅನಿರೀಕ್ಷಿತವಾಗಿ ಸರಕಾರದಿಂದ ಅನುಕೂಲವಾದ ಉತ್ತರವೇ ಬಂದಲ್ಲಿ ಸಭೆಗೆ ಅದನ್ನೆ ತಿಳಿಸಿಬಿಡುವುದು. ಆದ್ದರಿಂದ ಹೇಗೂ ಈ ಸಭೆ ಸೇರಿದ್ದು ನಿಷ್ಫಲವಾಗುವುದಿಲ್ಲವೆಂದು ಸತ್ಯಾಗ್ರಹ ಸಮಿತಿ ಭಾವಿಸಿತು.

ಸಭಾಕಾರ್ಯ ಮೊದಲಾಗುವಷ್ಟರಲ್ಲಿ ಒಬ್ಬ ಸೈಕಲ್ ಸ್ವಯಂಸೇವಕ ಸರಕಾರದ ಒಂದು ತಂತಿಯೊಂದಿಗೆ ಬಂದ. ಸರಕಾರ ಹಿಂದೀ ಜನಾಂಗದ ನಿರ್ಣಯಕ್ಕೆ ವ್ಯಸನವನ್ನು ಸೂಚಿಸಿ ತನ್ನ ಕಾರ್ಯನೀತಿಯಲ್ಲಿ ಯಾವ ಬದಲಾವಣೆಯೂ ಸಾಧ್ಯವಿಲ್ಲವೆಂದು ತಿಳಿಸಿತು. ಇದನ್ನು ಅಲ್ಲಿ ಸೇರಿದ ಜನರಿಗೆ ಓದಿ ಹೇಳಲಾಯಿತು. ಸನದುಗಳನ್ನು ಸುಡುವ ಪ್ರಸಂಗ ತಪ್ಪಿ ಹೋಗಲಿಲ್ಲವಲ್ಲಾ ಎಂಬ ಸಂತೋಷದಿಂದಲೋ ಏನೋ ಎನ್ನುವಂತೆ ಜನರು ಹರ್ಷಧ್ವನಿ ಗೈದರು.

ಸಭೆ ಮೊದಲಾಯಿತು. ಅಧ್ಯಕ್ಷರು ಗಂಭೀರವಾಗಿ ಪರಿಸ್ಥಿತಿಯನ್ನೆಲ್ಲ ವಿವರಿಸಿದರು. ಸಂದರ್ಭೋಚಿತವಾದ ಕೆಲವು ಗೊತ್ತುವಳಿಗಳಾದುವು.

ಸತ್ಯಾಗ್ರಹ ಸಮಿತಿಯ ವಶಕ್ಕೆ ಸುಟ್ಟುಹಾಕುವುದಕ್ಕಾಗಿ ಸುಮಾರು ೨೦೦೦ ಸನದುಗಳು ಬಂದಿದ್ದುವು. ಈ ಎಲ್ಲ ರಾಶಿಯನ್ನು ಒಂದು ಕಡಾಯಿಯಲ್ಲಿ ಹಾಕಿ ಎಣ್ಣೆ ಸುರುವಿ ಬೆಂಕಿ ಹಚ್ಚಿದೆವು. ಈ ಹೋಳೀ ಹಬ್ಬದ ಹರ್ಷದಿಂದ ಇಡೀ ಜನಸಮುದಾಯವೇ ಎದ್ದು ನಿಂತು ಮಾಡಿದ ಜಯಧ್ವನಿ ಸುತ್ತಲೂ ಮಾರ್ದನಿಸಿತು. ಸನದುಗಳನ್ನು ಈ ಮೊದಲು ಕೊಡದಿದ್ದವರು ಕೆಲವರು ಕೂಡ ವೇದಿಕೆಯ ಹತ್ತಿರ ಬಂದು ಕಡಾಯಿಯಲ್ಲಿ ಒಗೆಯಲು ಅವನ್ನು ಕೊಟ್ಟರು.

ಸಭೆಗೆ ಬಂದಿದ್ದ ಪತ್ರಿಕಾ ಸುದ್ದಿಗಾರರ ಮನಸ್ಸಿನ ಮೇಲೆ ಈ ದೃಶ್ಯ ಬಹಳ ಪರಿಣಾಮ ಮಾಡಿತು. ಅವರು ತಮ್ಮ ಪತ್ರಿಕೆಗಳಲ್ಲಿ ಈ ವೃತ್ತಾಂತ ವನ್ನು ಬಹಳ ಚೆನ್ನಾಗಿ ಬಣ್ಣಿಸಿದರು.

ಈ ಮಸೂದೆ ಕಟ್ಟಳೆಯಾಗಿ ಅಂಗೀಕಾರವಾದ ವರ್ಷವೇ—೧೯೦೭—ಶಾಸನ ಸಭೆಯಲ್ಲಿ ಜನರಲ್ ಸ್ಮಟ್ಸನಿಂದ ಇನ್ನೊಂದು ಮಸೂದೆ ಬಂತು. ಇದಕ್ಕೆ 'ಟ್ರಾನ್ಸ್‌ವಾಲ್ ಹೊಸ ಒಕ್ಕಲುಗಳ ನಿರೋಧಕ ಕಟ್ಟಳೆ' ಎಂದು ಹೆಸರು. ಈ ಕಟ್ಟಳೆ ಯಾವನೊಬ್ಬ ಹೊಸ ಹಿಂದೀಯನನ್ನು ಟ್ರಾನ್ಸ್‌ವಾಲಿಗೆ ಬರದಂತೆ ಅಪ್ರತ್ಯಕ್ಷವಾಗಿ ತಡೆಯಬಹುದಾಗಿದ್ದಿತು.

ತಮ್ಮ ಹಕ್ಕುಗಳ ಮೇಲೆ ನಡೆದ ಈ ಹೊಸ ದಾಳಿಯನ್ನೆದುರಿಸು ವುದು ಹಿಂದೀಯರಿಗೆ ಅವಶ್ಯವೆನಿಸಿತು. ಮುಂದಿನ ಎರಡು ವರುಷಗಳಲ್ಲಿ ಅನೇಕ ಸತ್ಯಾಗ್ರಹಿಗಳು ನೇಟಾಲ್ ವಸಾಹತಿನಿಂದ ಟ್ರಾನ್ಸ್‌ವಾಲಿಗೆ ಸ್ವೇಚ್ಛೆ ಯಿಂದ ಹೊಕ್ಕಿದ್ದರು. ಆದ್ದರಿಂದ ಅವರು ವಾಕ್ಸ್‌ರಸ್ಟ್ ಪಟ್ಟಣದ ಸುತ್ತು ಮುತ್ತಲೂ ಸೆರೆಯಾಗಿದ್ದರು. ನೇಟಾಲಿನ ಈ ಸಹಾಯಕ ಸತ್ಯಾಗ್ರಹಿಗಳ ಬೆಂಬಲಕ್ಕಾಗಿ, ಸನದುಗಳನ್ನು ಸುಟ್ಟುಹಾಕಿದ ಅನೇಕರು ಬೀದಿಯಲ್ಲಿ ಕಾಯಿಪಲ್ಯ ಮಾರುತ್ತ ಹೊರಟರು. ಹೀಗೆ ಮಾರಲು ಸನದು ಅಗತ್ಯವಾಗಿ ಬೇಕು. ಅದು ಇಲ್ಲದ್ದರಿಂದ ಅವರು ಸೆರೆಯಾದರು. ವಾಕ್ಸ್‌ರಸ್ಟ್ ಸೆರೆಮನೆ ಯಲ್ಲಿ ಒಮ್ಮೆ ಹಿಂದೀ ಸೆರೆಯಾಳುಗಳ ಸಂಖ್ಯೆ ೭೫ ರ ವರೆಗೆ ಏರಿತ್ತು. ಈ ಸತ್ಯಾಗ್ರಹಿಗಳನ್ನು ತುಂಬಲು ಸೆರೆಮನೆ ಸಾಕಾಗಲಿಲ್ಲ. ಇವರ ಈ ಪಟ್ಟಿನಿಂದ ಸರಕಾರಕ್ಕೆ ಬಹಳ ಕಾಟವಾಯಿತು. ಆದ್ದರಿಂದ ಸರಕಾರ ಇವರನ್ನು ಶಿಕ್ಷಿಸುವ ಬದಲು ಗಡಿಪಾರು ಮಾಡತೊಡಗಿತು. ಇದರಿಂದ ಕೆಲವು ಹಿಂದೀಯರು ಸ್ವಲ್ಪ ಹಣ್ಣಾದರು. ಆದರೆ ಮುಕ್ಕಾಲುಪಾಲು ಜನ ಬಹಳ ಜಿಗುಟುತನ ದಿಂದಲೂ ಗೆಲುವಿನಿಂದಲೂ ಇದ್ದು ಹೋರಾಟವನ್ನು ಮುಂದೆ ಸಾಗಿಸಿದರು.

## ೩೩. ಟಾಲ್‌ಸ್ಟಾಯ್ ಆಶ್ರಮ

ಇಲ್ಲಿಯವರೆಗೆ-೧೯೧೦- ಸೆರೆಮನೆ ಸೇರಿದವರ ಕುಟುಂಬಕ್ಕೆ ತಿಂಗಳು ತಿಂಗಳೂ ಹಣದ ಸಹಾಯ ಮಾಡುತಿದ್ದೆವು. ಇದು ಅಯೋಗ್ಯವಾದುದೆಂದೂ

ಸಾರ್ವಜನಿಕ ಹಣದ ಅಪವ್ಯಯ ವೆಂದೂ ತೋರಿತು. ಇದಲ್ಲದೆ ಮೇಲಿಂದ ಮೇಲೆ ಸೆರೆಯಾಗುವ ಜನರು ತಮ್ಮ ಬಿಡುಗಡೆಯ ಕಾಲದಲ್ಲಿ ವಾಸಿಸುವುದೆಲ್ಲಿ? ಅವರಿಗೆ ಯಾರೂ ಕೆಲಸ ಕೊಡುವುದಿಲ್ಲ. ಈ ಎರಡೂ ತೊಂದರೆಗಳಿಗೆ ಇರುವ ಪರಿಹಾರ ಒಂದೇ ಒಂದು—ಎಲ್ಲ ಸತ್ಯಾಗ್ರಹಿಗಳೂ ಕುಟುಂಬ ಸಹಿತ ರಾಗಿ ಒಂದೇ ಕಡೆ ಇದ್ದು ಸಹಕಾರ ತತ್ವದಿಂದ ಮಾದರಿಯ ಏಕಕುಟುಂಬ (common wealth) ದಂತೆ ನಡೆಯುವುದು. ಶ್ರೀ. ಕಾಲನ್‌ಬಾಕ್‌ರವರು ಜರ್ಮನ್ ಶಿಲ್ಪಿ. ನನ್ನ ನಿಕಟ ಸ್ನೇಹಿತರಾದ ಇವರು ಉದಾರತನದಿಂದ ೧೧೦೦ ಎಕರೆಯ ಒಂದು ಹೊಲವನ್ನು ಪುಕ್ಕಟೆಯಾಗಿ ಕೊಟ್ಟರು.

ಇದರಲ್ಲಿದ್ದುದು ಹಣ್ಣು ಬಿಡುವ ಸುಮಾರು ೧೦೦೦ ಗಿಡ; ದಿನ್ನೆಯ ಬದಿಯಲ್ಲಿ ೪—೬ ಜನರಿಗೆ ಸಾಕಾಗುವ ಚಿಕ್ಕಮನೆ. ನೀರಿಗೆ ಒಂದು ಒಸರು, ಎರಡು ಬಾವಿ ಇದ್ದುವು. ಒಂದು ಮೈಲು ದೂರದಲ್ಲಿ ರೇಲ್ವೆ ಸ್ಟೇಶನೂ—ಲಾಲೇ ಅದರ ಹೆಸರು—, ಇಪ್ಪತ್ತೊಂದು ಮೈಲು ದೂರದಲ್ಲಿ ಜೋಹಾನ್ಸ್ ಬರ್ಗೂ ಇದ್ದುವು. ಈ ಹೊಲದಲ್ಲಿ ಮನೆಗಳನ್ನು ಕಟ್ಟಿ, ಇರಲು ಸತ್ಯಾಗ್ರಹಿ ಗಳ ಕುಟುಂಬಗಳನ್ನು ಕರೆಯಬೇಕೆಂದು ನಿಶ್ಚಯಿಸಿದೆವು. ಮಾಗಿಯಲ್ಲಿ ಕಿತ್ತಳೆ, ಜರದಾಲು, ದ್ರಾಕ್ಷೆ ಹೆಗ್ಗಳವಾಗಿ ಬೆಳೆಯುತಿದ್ದುವು; ಎಷ್ಟು ತಿಂದರೂ ಮುಗಿಯುತ್ತಿರಲಿಲ್ಲ. ನಮ್ಮ ಬಿಡಾರಕ್ಕೂ ಒಸರಿಗೂ ೫೦೦ ಗಜ ಮಾತ್ರ ದೂರ. ಮನೆಗೆಲಸಕ್ಕೆ ಮಾತ್ರವಲ್ಲ, ಉಳುವ ಕಟ್ಟುವ ಕೆಲಸಕ್ಕೂ ಆಳು ಗಳನ್ನು ಗೊತ್ತುಮಾಡಿಕೊಳ್ಳಕೂಡದೆಂಬ ಛಲ ನಮ್ಮದು. ಹೀಗೆ ಅಡಿಗೆ ಯಿಂದ ತೋಟಿಯ ವರೆಗೆ ಎಲ್ಲವನ್ನೂ ನಾವೇ ಮಾಡುತಿದ್ದೆವು. ಹೆಂಗುಸರ ವಸತಿ ಬೇರೆಯಾಗಿರಬೇಕೆಂದು ಮೊದಲೇ ಗೊತ್ತಾಗಿದ್ದಿತು. ಆದ್ದರಿಂದ ಮನೆಗಳ ಎರಡು ಸಾಲು, ಒಂದಕ್ಕೊಂದು ಸ್ವಲ್ಪ ದೂರವಾಗಿರುವಂತೆ, ಕಟ್ಟ ಬೇಕಾಯಿತು. ಆ ಕಟ್ಟಡ ಆಗಿನ ಮಟ್ಟಿಗೆ ೧೦ ಹೆಂಗುಸರಿಗೆ, ೬೦ ಗಂಡುಸ ರಿಗೆ ಸಾಕಾಗುವಷ್ಟಿದ್ದಿತು. ಇದಲ್ಲದೆ ಕಾಲನ್‌ಬಾಕರಿಗೊಂದು ಮನೆ, ಅದರ ಬದಿಯಲ್ಲೇ ಒಂದು ಸಾಲೆ, ಮತ್ತು ಬಡಿಗತನ ಸಮಗಾರಿಕೆ ಮುಂತಾದುವು ಗಳಿಗಾಗಿ ಒಂದು ಕಟ್ಟಡ, ಇಷ್ಟನ್ನು ಕಟ್ಟಬೇಕಾಯಿತು.

ಅಲ್ಲಿ ಬಂದು ನೆಲಸಿದವರು ಗುಜರಾತಿಗಳು, ತಮಿಳರು, ಆಂಧ್ರರು ಮತ್ತು ಉತ್ತರ ಹಿಂದುಸ್ಥಾನದವರು. ಜಾತಿಗಳ ಪ್ರಕಾರ ಹೇಳುವುದಾದರೆ

ಹಿಂದು, ಮುಸಲ್ಮಾನ, ಪಾರ್ಸಿಗಳು; ಕಿರಿಸ್ತಾನರೂ ಇದ್ದರು. ಒಟ್ಟಿನಲ್ಲಿ ಸುಮಾರು ೪೦ ತರುಣರು; ಇಬ್ಬರು ಮೂವರು ಮುದುಕರು; ಐವರು ಹೆಂಗುಸರು; ೨೦—೩೦ ಮಕ್ಕಳು. ಇದರಲ್ಲಿ ನಾಲ್ಕೈದು ಹುಡುಗಿಯರು

ಅಶಕ್ತರಿದ್ದವರು ಟಾಲ್‌ಸ್ಟಾಯ್ ಆಶ್ರಮಕ್ಕೆ ಬಂದು ಸಶಕ್ತರಾದರು. ಶ್ರಮಜೀವನ ಪ್ರತಿ ಒಬ್ಬರಿಗೂ ಪೌಷ್ಟಿಕ ಆಹಾರವಾದಂತಾಯಿತು.

ಜೋಹಾನ್ಸ್‌ಬರ್ಗಿಗೆ ಪ್ರತಿ ಒಬ್ಬರೂ ಆಗಿಂದಾಗ ಹೋಗಬೇಕಾಗುತ್ತಿತ್ತು. ಮಕ್ಕಳಿಗೆ ಅದೊಂದು ಚೆಲ್ಲಾಟ. ಏನಾದರೂ ಕೆಲಸ ಇರುತ್ತಿದ್ದುದರಿಂದ ನಾನೂ ಹೋಗಬೇಕಾಗುತ್ತಿದ್ದಿತು. ಸಾರ್ವಜನಿಕ ಕೆಲಸಕ್ಕಾಗಿ ಮಾತ್ರ ಉಗಿಬಂಡಿಯ ಪ್ರಯಾಣ ಮಾಡಬಹುದೆಂದೂ ಅದೂ ಮೂರನೆ ತರಗತಿಯ ಪ್ರಯಾಣವೆಂದೂ ನಾವು ನಿಯಮ ಮಾಡಿದ್ದೆವು. ಮನರಂಜನೆಗಾಗಿ ಹೋಗುವವರು ಮನೆಯಿಂದ ಬುತ್ತಿ ತೆಗೆದುಕೊಂಡು ನಡೆಯುತ್ತ ಹೋಗಬೇಕು. ಊಟ ಉಪಚಾರಕ್ಕಾಗಿ ಅಲ್ಲಿಯಾರೂ ಏನನ್ನೂ ವೆಚ್ಚ ಮಾಡಕೂಡದು. ಈ ಬಿಗಿಯಾದ ಕಟ್ಟಳೆ ಇರದಿದ್ದರೆ ಹಳ್ಳಿಯ ಜೀವನದಿಂದ ಉಳಿಸಿದ ಹಣ ಉಗಿಬಂಡಿಗೂ ತಿಂಡಿ ತಿನಸುಗಳಿಗೂ ಪೋಲು ಮಾಡಬೇಕಾಗುತ್ತಿದ್ದಿತು. ಬುತ್ತಿಯೋ ಅತಿ ಸಾದಾ; ಮನೆಯಲ್ಲಿಯೆ ಬೀಸಿದ ಹಿಟ್ಟಿನಿಂದ ಮನೆಯಲ್ಲಿಯೆ ಮಾಡಿದ ರೊಟ್ಟಿ; ಮನೆಯಲ್ಲಿ ತೆಗೆದ ನೆಲಗಡಲೆ ಎಣ್ಣೆ; ಮತ್ತು ಕಿತ್ತಳೆ ಪಾಕ. ಅದೂ ಮನೆಯಲ್ಲಿ ಮಾಡಿದ್ದು. ನಮ್ಮಲ್ಲಿ ಕಬ್ಬಿಣದ ಒಂದು ಬೀಸುವ ಕಲ್ಲಿತ್ತು. ಆದರಿಂದ ಮನೆಯಲ್ಲೇ ಗೋದಿ ಬೀಸುತ್ತಿದ್ದೆವು. ನೆಲಗಡಲೆ ಮೊದಲು ಬೇಯಿಸುವುದು; ಆಮೇಲೆ ಕುಟ್ಟಿ ಎಣ್ಣೆ ತೆಗೆಯುವುದು. ಇದು ಬೆಣ್ಣೆಗಿಂತ ನಾಲ್ಕರಷ್ಟು ಅಗ್ಗ. ಕಿತ್ತಳೆ ಹಣ್ಣಿಗೆ ಮಿತಿಯೆ ಇರಲಿಲ್ಲ. ಆದ್ದರಿಂದ ಪಾಕಕ್ಕಾಗಿ ಪೇಚಾಡುವ ಅಗತ್ಯವಿರಲಿಲ್ಲ. ಆಟ್ಟಿಸಿದ್ದ ಹಾಲನ್ನೇ ಬಹುಶಃ ನಾವು ಉಪಯೋಗಿಸುತ್ತಿದ್ದೆವು. ಆಕಳಿನ ಹಾಲು ಬಳಸುತ್ತಿದ್ದುದು ಎಂದೋ ಒಮ್ಮೆ.

ಈಗ ಮತ್ತೆ ಜೋಹಾನ್ಸ್‌ಬರ್ಗ್ ಪಯಣಗಳ ವಿಷಯ. ಅಲ್ಲಿಗೆ ಹೋಗುವ ಅಗತ್ಯ ಇದ್ದವನು ವಾರಕ್ಕೆ ಒಂದೆರಡು ಸಲ ಕಾಲ್ನಡಿಗೆಯಿಂದ ಹೋಗಿ ಅಂದೇ ಮರಳಿ ಬರುತ್ತಿದ್ದ. ನಾನು ಮೊದಲೇ ಹೇಳಿದಂತೆ ಜೋಹಾನ್ಸ್‌ಬರ್ಗ್ ಪ್ರವಾಸವೆಂದರೆ ೨೧ ಮೈಲು ಹೋಗಿ ೨೧ ಮೈಲು

ಬರಬೇಕು. ನಡೆದುಕೊಂಡೇ ಹೋಗಬೇಕೆಂಬ ಈ ಒಂದೇ ಒಂದು ನಿಯಮ ದಿಂದ ನಾವು ನೂರಾರು ರೂಪಾಯಿ ಉಳಿಸಿದೆವು. ಹೀಗೆ ನಡಿಗೆಯಿಂದ ಹೋದವರಿಗೆ ಲಾಭವೂ ಬಹಳವಾಯಿತು. ಕೆಲವರು ನಡಿಗೆಯ ರೂಢಿಯನ್ನು ಹೊಸದಾಗಿ ಮೈಗೂಡಿಸಿಕೊಂಡರು. ಸಾಮಾನ್ಯವಾಗಿ ಬೆಳಗಿನ ಜಾವ ಎರಡು ಗಂಟೆಗೆ ಎದ್ದು ಎರಡೂವರೆಗೆ ಹೊರಡುವುದು ವಾಡಿಕೆ. ಆರೇಳು ಗಂಟೆಗಳಲ್ಲಿ ಜೋಹಾನ್ಸ್‌ಬರ್ಗ್ ಸೇರಬಹುದು. ಆಶ್ರಮದಿಂದ ಅಲ್ಲಿಗೆ ಅತಿ ಬೇಗನೆ ಹೋದದ್ದೆಂದರೆ ೪ ಗಂಟೆ ೧೮ ನಿಮಿಷಗಳಲ್ಲಿ.

ನಮ್ಮ ಆಶ್ರಮ ಯಾವಾಗಲೂ ಉದ್ಯೋಗಮಗ್ನವಾಗಿದ್ದು ಸ್ವಲ್ಪ ಮಟ್ಟಿಗಾದರೂ ಸ್ವಾವಲಂಬಿಯಾಗಬೇಕೆಂಬುದು ನಮ್ಮ ಯೋಚನೆ. ನಮ್ಮ ಈ ಧ್ಯೇಯ ಸಾಧಿಸಿದರೆ ಸರಕಾರದೊಂದಿಗೆ ಅವಶ್ಯವಿದ್ದಾಗ ಅನಿಶ್ಚಿತ ಅವಧಿಯವರೆಗೆ ಹೋರಾಡಬಹುದಾಗಿದ್ದಿತು. ಆದ್ದರಿಂದ ಒಂದು ಚಿಕ್ಕ ಮಟ್ಟಿನ ಕಾರಖಾನೆಯನ್ನು ಮೊದಲಿಸಿದೆವು. ಅಲ್ಲಿಯೆ ಹತ್ತಿರದಲ್ಲಿ ಜರ್ಮನ್ ಕ್ಯಾಥೊಲಿಕ್ ಸನ್ಯಾಸಿಗಳ ಒಂದು ಮಠವಿತ್ತು. ಈ ಉದ್ಯೋಗ ವನ್ನು ಅಲ್ಲಿ ಸುಲಭವಾಗಿ ಕಲಿಯಬಹುದಾಗಿತ್ತು. ಶ್ರೀ. ಕಾಲನ್‌ಬಾಕರು ಅಲ್ಲಿಗೆ ಹೋಗಿ ಇದನ್ನು ಕಲಿತರು. ಅವರಿಂದ ನಾನು ಕಲಿತೆ. ಉಳಿದ ಕೆಲಸಗಾರರಿಗೆ ಕಲಿಸುವುದು ನನ್ನ ಸರದಿಯಾಯಿತು. ಸ್ವತಃ ನಾನೇ ಎಷ್ಟೋ ಡಜನ್ ಜೊತೆ ಹೊಲಿದುದು ನನಗೆ ನೆನಪಿದೆ. ಈ ಕೆಲಸದಲ್ಲಿ ನನ್ನನ್ನು ಮೀರಿಸಿದ ಎಷ್ಟೋ ತರುಣರಿದ್ದರು. ಈ ಜೋಡು ನಮ್ಮ ಸ್ನೇಹಿತ ರಿಗೆ ಮಾರಿ ಸ್ವಲ್ಪ ಹಣ ಗಳಿಸಿದೆವು. ಬಡಿಗತನವನ್ನು ಆರಂಭಿಸಿ ಕಾಲುಮಣೆ ಯಿಂದ ಪೆಟ್ಟಿಗೆಯವರೆಗೆ ಎಲ್ಲ ಚಿಕ್ಕ ದೊಡ್ಡ ಸಾಮಾನು ತಯಾರಿಸಿದೆವು.

ಈ ವಸಾಹತಿಗೆ ಸಾಲೆಯೊಂದು ಆವಶ್ಯಕವಾದ ವಸ್ತುವಾಯಿತು. ಆದರೆ ಎಲ್ಲ ಕೆಲಸಗಳಲ್ಲಿ ಇದು ಮಹಾಕಷ್ಟದ ಕೆಲಸವಾಯಿತು. ಕೊನೆಯ ವರೆಗೂ ನಮಗೆ ಇದರಲ್ಲಿ ಪೂರ್ಣ ಜಯ ಸಿಗಲಿಲ್ಲ. ಹೆಚ್ಚಾಗಿ ನಾನೂ ಕಾಲನ್‌ಬಾಕರೂ ಕಲಿಸುವ ಕೆಲಸ ಕೈಕೊಳ್ಳುತ್ತಿದ್ದೆವು. ಸಾಲೆ ಆರಂಭವಾಗು ತಿದ್ದುದು ಮಧ್ಯಾಹ್ನದ ನಂತರ ಮಾತ್ರ. ಮುಂಜಾವಿನ ಕೆಲಸದಿಂದ ಆಗ ನಾವು ದಣಿದಿರುತಿದ್ದೆವು. ವಿದ್ಯಾರ್ಥಿಗಳೂ ಅಷ್ಟೇ. ಆದ್ದರಿಂದ ಗುರುಶಿಷ್ಯ ರಿಬ್ಬರೂ ತೂಕಡಿಸುತಿದ್ದೆವು. ತೂಕಡಿಕೆ ಬಂದಾಗ ಕಣ್ಣಿಗೆ ನೀರು

ಚಿಮುಕಿಸಿಕೊಳ್ಳುತ್ತಿದ್ದೆವು. ಮಕ್ಕಳೊಡನೆ ಆಟವಾಡಿ ಅವರೂ ಎಚ್ಚರವಿರುವಂತೆ ಮಾಡಿ ನಾವೂ ಎಚ್ಚರಗೊಳ್ಳಲು ಯತ್ನಿಸುತಿದ್ದೆವು. ಆದರೆ ಕೆಲವು ಸಲ ಅದು ನಿರುಪಯೋಗಿಯಾಗುತಿದ್ದಿತು. ದೇಹಕ್ಕೆ ವಿಶ್ರಾಂತಿ ಬೇಕೇ ಬೇಕಾಗುತಿದ್ದಿತು. ತಡೆಗಟ್ಟಿದರೆ ಅದು ಕೇಳುತ್ತಿರಲಿಲ್ಲ. ನಮ್ಮ ಎಷ್ಟೋ ಕಷ್ಟಗಳಲ್ಲಿ ಇದೊಂದು ಚಿಕ್ಕ ಪಡಿಪಾಟಲು. ಏಕೆಂದರೆ ಇಂತಹ ತೂಕಡಿಕೆಗಳಲ್ಲಿಯೂ ತರಗತಿಗಳು ನಡೆದೇ ನಡೆಯುತಿದ್ದುವು. ಗುಜರಾತಿ, ತಮಿಳು, ಮತ್ತು ತೆಲುಗು ಹೀಗೆ ಮೂರು ಭಾಷೆಗಳನ್ನಾಡುವ ವಿದ್ಯಾರ್ಥಿಗಳಿಗೆ ನಾವು ಏನನ್ನು ಕಲಿಸುವುದು? ಹೇಗೆ ಕಲಿಸುವುದು? ಮಾತೃಭಾಷೆಯನ್ನೇ ಕಲಿಸುವ ಭಾಷೆಯನ್ನಾಗಿ ಮಾಡಬೇಕೆಂದು ನನಗೆ ತುಂಬಾ ಉತ್ಸಾಹ. ತಮಿಳೋ ನನಗೆ ಅಲ್ಪ ಸ್ವಲ್ಪ ಬರುತಿತ್ತು. ತೆಲುಗು ಏನೂ ಗೊತ್ತಿರಲಿಲ್ಲ. ಇಂತಹ ಸ್ಥಿತಿಯಲ್ಲಿ ಶಿಕ್ಷಕ ಏನು ತಾನೆ ಮಾಡಬಲ್ಲ?

ಆದರೆ ಈ ಬೋಧನಾಪ್ರಯೋಗಕ್ಕೆ ಫಲ ಸಿಗದಿರಲಿಲ್ಲ. ಮಕ್ಕಳು ಪರಮತ ದ್ವೇಷದ ಅಂಟುರೋಗಕ್ಕೆ ಬಲಿಬೀಳದೆ ಒಬ್ಬರು ಇನ್ನೊಬ್ಬರ ಧರ್ಮವನ್ನು, ರೀತಿ ನೀತಿಗಳನ್ನು ಉದಾರಭಾವದಿಂದ ನೋಡುವುದನ್ನು ಕಲಿತರು. ಬೆನ್ನಲ್ಲಿ ಬಿದ್ದ ಅಣ್ಣತಮ್ಮಂದಿರಂತೆ ಒಂದುಗೂಡಿ ಇರುವುದನ್ನು ಕಲಿತರು. ಅವರಿಗೆ ಉದ್ಯೋಗ, ಪರಸ್ಪರರ ಸೇವೆ, ಗೌರವ, ಇವುಗಳ ಪಾಠವೂ ದೊರೆಯಿತು. ಟಾಲ್‌ಸ್ಟಾಯ್ ಆಶ್ರಮದ ಮಕ್ಕಳ, ತರುವಾಯದ ಚಟುವಟಿಕೆಗಳನ್ನು ನಾನು ಸ್ವಲ್ಪ ತಿಳಿದುಕೊಂಡಿದ್ದೇನೆ. ಇದರಿಂದ ಅವರು ಪಡೆದ ಶಿಕ್ಷಣ ವ್ಯರ್ಥವಾಗಲಿಲ್ಲವೆಂದು ಖಂಡಿತವಾಗಿ ಹೇಳಬಲ್ಲೆ. ಇದು ಅಪೂರ್ಣವಿದ್ದರೂ ಪ್ರಗತಿಪರ ಪ್ರಯೋಗ. ಇದರ ಹಿನ್ನೆಲೆ ಧಾರ್ಮಿಕ ಜೀವಾಳ. ಶಿಕ್ಷಣಪ್ರಯೋಗದ ಈ ನೆನಹುಗಳು ಅಲ್ಲಿಯ ಉಳಿದ ಅತಿ ಮಧುರವಾದ ಎಷ್ಟೋ ನೆನಹುಗಳಿಗೆ ಎಳ್ಳಷ್ಟೂ ಕಡಿಮೆಯಾಗಿಲ್ಲ.

## ೩೪. ಹೆಂಗುಸರೂ ಧುಮುಕಿದರು —೨

ಶ್ರೀ. ಗೋಖಲೆಯವರು ಸರಕಾರಕ್ಕೂ ಸತ್ಯಾಗ್ರಹಿಗಳಿಗೂ ಮಧ್ಯಸ್ಥರಾಗಿ ೧೯೧೨ ರ ಚಳಿಗಾಲದಲ್ಲಿ ದಕ್ಷಿಣ ಆಫ್ರಿಕೆಗೆ ಬಂದರು. ಜನರಲ್

ಬೋಥಾರನ್ನು ಕಂಡು ಬಂದ ಮೇಲೆ, ಎಲ್ಲವೂ ಸರಿಹೋಗುವುದೆಂದು ಅವರು ನಮಗೆ ನಂಬಿಗೆ ಇತ್ತರು. ಮುಂದಿನ ವರುಷ ಕರಾಳಶಾಸನ, ಮೂರು ಪೌಂಡಿನ ತೆರಿಗೆ, ಎರಡೂ ತೆಗೆದುಹಾಕಲಾಗುವುದೆಂದು ಧೈರ್ಯಕೊಟ್ಟರು.

ಆದರೆ ಮುಂದಿನ ವರುಷ–೧೯೧೩ ರಲ್ಲಿ– ಶಾಸನ ಸಭೆ ನಮ್ಮ ಪರಿಹಾರಕ್ಕಾಗಿ ಏನೂ ಮಾಡಲಿಲ್ಲ. ಆದ್ದರಿಂದ ಟಾಲ್‌ಸ್ಟಾಯ್ ಆಶ್ರಮವಾಸಿಗಳು ೩ ಪೌಂಡು ತೆರಿಗೆಯ ವಿರುದ್ಧವಾಗಿ ಸತ್ಯಾಗ್ರಹದ ಸಿದ್ಧತೆಯಲ್ಲಿ ತೊಡಗಿದರು.

ಇದುವರೆಗೆ ನಾವು, ಸೆರೆಯಾಗುತ್ತಲಿದ್ದ ತಮ್ಮ ಗಂಡಂದಿರನ್ನು ಹಿಂಬಾಲಿಸಲು ಉತ್ಸುಕರಾಗಿದ್ದ ಹೆಂಗುಸರನ್ನು ತಡೆದಿದ್ದೆವು. ಆದರೆ ನಮ್ಮ ಗುರಿಯನ್ನು ಬಲಪಡಿಸಲೋ ಎಂಬಂತೆ, ದಕ್ಷಿಣ ಆಫ್ರಿಕೆಯ ಸರಕಾರ 'ಕ್ರೈಸ್ತಧರ್ಮ ವಿಧಿಯ ಪ್ರಕಾರ ನಡೆಯದ, ಅಥವಾ ರೆಜಿಸ್ಟರಾಗದ, ಮದುವೆಗಳನ್ನು ಶಾಸನ ಬಾಹಿರ ಮಾಡುವ' ಒಂದು ಕಟ್ಟಳೆಯನ್ನು ಬಳಕೆಗೆ ತಂದಿತು. ಹೀಗೆ ಹಿಂದೂ, ಮುಸಲ್ಮಾನ, ಝೊರೋಸ್ಟ್ರಿಯನ್ ಪದ್ಧತಿಯ ಎಲ್ಲ ಮದುವೆಗಳು ಒಂದೇ ಪೆಟ್ಟಿಗೆ ಕಟ್ಟಳೆಗೀಡಿಗಳಾದುವು. ಈ ಶಾಸನದ ಮೇರೆಗೆ, ದಕ್ಷಿಣ ಆಫ್ರಿಕೆಯೊಳಗಿನ ಭಾರತೀಯರ ಹೆಂಡತಿಯರೆಲ್ಲ ಅಂದಿನಿಂದ ತಮ್ಮ ಗಂಡಂದಿರ 'ಧರ್ಮಪತ್ನಿ'ಯರಾಗಿ ಉಳಿಯಲಿಲ್ಲ. ನೇರವಾಗಿ ಅವರಿಗೇ ಸಂಬಂಧಿಸಿದ ಇಂತಹ ಅತಿ ಮಹತ್ವದ ಹೇತುವಿಗಾಗಿ ಹೆಂಗುಸರೂ ಹೋರಾಡುವುದು ಅಗತ್ಯವೆಂದು ನಮಗೆ ತೋರಿತು.

ಇಲ್ಲಿಗೆ ವಿಷಯ ಸನ್ನಿವೇಶಕ್ಕೆ ತಡವಾಗಲಿಲ್ಲ. ನಮ್ಮ ಇಡಿಯ ಸ್ತ್ರೀವರ್ಗಕ್ಕೇ ಆದ ಅಪಮಾನದಿಂದ ತಾಳ್ಮೆ ಉಳಿಯುವುದೆಂತು? ಸತ್ಯಾಗ್ರಹಿಗಳ ಸಂಖ್ಯೆ ಕಡಿಮೆ ಇದ್ದರೂ ಅಷ್ಟೇ, ಹೆಚ್ಚಿದ್ದರೂ ಅಷ್ಟೇ; ಉಗ್ರ ಸತ್ಯಾಗ್ರಹವನ್ನೇ ಹೂಡುವುದೆಂದು ನಿಶ್ಚಯಿಸಿದೆವು. ಹೆಂಗುಸರು ಈ ಹೋರಾಟದಲ್ಲಿ ಧುಮುಕುವುದನ್ನು ತಡೆಯಕೂಡದು ಮಾತ್ರವಲ್ಲ, ಗಂಡುಸರ ಸಮಾನ-ಸ್ಕಂಧರಾಗಿ ಬರಲು ಅವರನ್ನು ಹುರಿದುಂಬಿಸಬೇಕೆಂದು ನಿರ್ಣಯವಾಯಿತು. ನಾವು ಮೊದಲಿಗೆ ಟಾಲ್‌ಸ್ಟಾಯ್ ಆಶ್ರಮದ ಹೆಂಗುಸರನ್ನೇ ಆಮಂತ್ರಿಸಿದೆವು. ಈ ಹೋರಾಟದಲ್ಲಿ ಅವರು ಸಂತೋಷದಿಂದ ಸೇರಲು ಸಿದ್ಧರಿರುವುದಾಗಿ ನನಗೆ ಕಂಡುಬಂತು. ಇದರಲ್ಲಿ ಧುಮುಕುವುದರಿಂದ ಒದಗುವ

ಕಷ್ಟಗಳನ್ನೆಲ್ಲ ನಾನು ಅವರಿಗೆ ವಿವರಿಸಿದೆ. ಆಹಾರ, ಬಟ್ಟೆ ಬರೆ, ವ್ಯಕ್ತಿ-ಸ್ವಾತಂತ್ರ್ಯ, ಇವುಗಳಿಗೆ ಬರುವ ಅಡ್ಡಿ ಆತಂಕಗಳನ್ನೆಲ್ಲ ತಾಳಿಕೊಳ್ಳಬೇಕಾಗುವುದೆಂದೂ ಹೇಳಿದೆ. ಸೆರೆಮನೆಯಲ್ಲಿ ಅತಿ ಶ್ರಮದ ಕೆಲಸ ಮಾಡಬೇಕಾಗಬಹುದು; ಬಟ್ಟೆ ಒಗೆಯಬೇಕಾಗಬಹುದು; ಕಾವಲುಗಾರರಿಂದ ಅಪಮಾನವಾಗುವುದು ಅಸಂಭವವಲ್ಲ; ಎಂದು ಎಚ್ಚರಿಸಿದೆ. ಆದರೆ ಈ ಎಲ್ಲ ಅಕ್ಕತಂಗಿಯರು ಗಂಡುಗಲಿಗಳು. ಇದಕ್ಕೆ ಯಾವುದಕ್ಕೂ ಹೆದರಲಿಲ್ಲ. ಇವರಲ್ಲಿ ಒಬ್ಬಳಿಗೆ ಒಂದು ಚಿಕ್ಕಮಗು; ಆರು ಜನರು ಕೈಕೂಸಿನ ತಾಯಂದಿರು. ಆದರೆ ಎಲ್ಲರಿಗೂ ಈ ಸಂಗ್ರಾಮದಲ್ಲಿ ಸೇರಲು ಆತುರ. ಟ್ರಾನ್ಸ್‌ವಾಲಿನಿಂದ ನೇಟಾಲಿಗೆ, ಅಥವಾ ನೇಟಾಲಿನಿಂದ ಟ್ರಾನ್ಸ್‌ವಾಲಿಗೆ ಹೋಗುವುದು ಅಪರಾಧವಾಗಿದ್ದಿತು. ಸ್ವಯಂಸೇವಿಕೆಯರ ಒಂದು ಗುಂಪನ್ನು ನೇಟಾಲಿನಿಂದ ಟ್ರಾನ್ಸ್‌ವಾಲಿಗೆ ಕಳಿಸಬೇಕೆಂಬ ಹಂಚಿಕೆ ನಮ್ಮದು. ಸನದುಗಳಿಲ್ಲದುದರಿಂದ ಅಲ್ಲಿ ಅವರನ್ನು ಸೆರೆ ಮಾಡುವ ಸಂಭವವಿತ್ತು. ಟ್ರಾನ್ಸ್‌ವಾಲಿನಲ್ಲಿ ಸೆರೆಯಾಗದಿದ್ದರೆ ಮರಳಿ ನೇಟಾಲನ್ನು ಪ್ರವೇಶಿಸುವುದು. ಅಲ್ಲಿ ಅವರ ಸೆರೆಯಾಯಿತೋ, ಅನುಕೂಲವಾಯಿತು. ಆಗದಿದ್ದರೆ, ನ್ಯೂ ಕ್ಯಾಸಲ್ ಕಲ್ಲಿದ್ದಲಿನ ಕಣಿಗೆ ಹೋಗುವುದು. ನ್ಯೂಕ್ಯಾಸಲು ಕಲ್ಲಿದ್ದಲಿನ ಒಂದು ದೊಡ್ಡ ಕೇಂದ್ರ. ಅಲ್ಲಿ ತಮಿಳು ತೆಲುಗು ಕೂಲಿಕಾರರೇ ಹೆಚ್ಚು. ಅಲ್ಲಿಗೆ ಹೋಗಿ ಕೂಲಿಕಾರರನ್ನೆಲ್ಲ ಸಂಪಿಗೆ ಪ್ರೋತ್ಸಾಹಿಸುವುದು.

ಫಿನಿಕ್ಸ್‌ಗೆ ಹೋಗಿ ಅಲ್ಲಿಯ ಹಿಂದೀಯರೆದುರು ನನ್ನ ಹಂಚಿಕೆಗಳನ್ನೆಲ್ಲ ಇಟ್ಟೆ. ಮೊಟ್ಟಮೊದಲು ಅಲ್ಲಿಯ ಹೆಂಗುಸರ ಅಭಿಪ್ರಾಯ ತಿಳಿದುಕೊಂಡೆ. ಈ ಹೆಂಗುಸರನ್ನು ಸೆರೆಮನೆಗೆ ಅಟ್ಟುವುದೆಂದರೆ ಕುತ್ತಿನ ಹುತ್ತ ಕೆದರಿದಂತೆ ಎಂಬುದು ನನಗೆ ಗೊತ್ತಿತ್ತು. ಅವರಲ್ಲಿ ಹೆಚ್ಚು ಜನ ಗುಜರಾತಿಗಳು. ಟ್ರಾನ್ಸ್‌ವಾಲ್ ಹೆಂಗುಸರಿಗಿದ್ದ ಶಿಕ್ಷಣ, ಅನುಭವ, ಇವರಿಗಿರಲಿಲ್ಲ. ಇದಲ್ಲದೆ ಎಷ್ಟೋ ಜನ ನನ್ನ ನೆಂಟರು. ನನ್ನ ವರ್ಚಸ್ಸಿಗೊಳಗಾಗಿ ಕಾರ್ಯಪ್ರವೃತ್ತರಾಗಬಹುದು. ನ್ಯಾಯಾಸ್ಥಾನದಲ್ಲಿ ವಿಚಾರಣೆಯ ಕಾಲಕ್ಕೆ ಇವರು ಹಿಮ್ಮೆಟ್ಟಿದರೆ ಹೇಗೆ? ಸೆರೆಮನೆಯಲ್ಲಿರುವಷ್ಟು ಗಟ್ಟಿಗತನ ಇಲ್ಲದಿದ್ದರೋ? ಆಗ ಕ್ಷಮೆಬೇಡುವುದೇ ಇವರಿಗೆ ತೋಚುವ ಮಾರ್ಗ. ಇದರಿಂದ ನನಗೆ ಬಲವಾದ ಆಘಾತವಾಗುವುದು ಮಾತ್ರವಲ್ಲ; ಚಳುವಳಿಗೂ ದೊಡ್ಡ ಪೆಟ್ಟು

ಬೀಳುವುದು. ನನ್ನ ಹೆಂಡತಿಯಲ್ಲಿ ಮಾತ್ರ ಈ ಯಾವ ವಿಷಯವನ್ನೂ ಪ್ರಸ್ತಾಪಿಸಕೂಡದೆಂದು ನಿರ್ಣಯಿಸಿದೆ. ಏಕೆಂದರೆ ಆಕೆ ನನ್ನ ಯಾವ ಸೂಚನೆಗೂ 'ಇಲ್ಲ' ಎನ್ನುತ್ತಿರಲಿಲ್ಲ. 'ಆಗಲಿ' ಎಂದರೆ ಆಕೆಯ ಒಪ್ಪಿಗೆಗೆ ನಾನು ಯಾವ ಬೆಲೆಯನ್ನು ಕೊಡಬೇಕು? ಇಂತಹ ಗಂಭೀರವಾದ ವಿಷಯದಲ್ಲಿ ಗಂಡನು ಕೈಹಾಕುವುದು ತರವಲ್ಲ. ತನಗೆ ಸರಿದೋರಿದಂತೆ ಮಾಡಲು ಹೆಂಡತಿಗೇ ಬಿಡುವುದು ಮೇಲು.

ಈ ವಿಷಯದಲ್ಲಿ ಉಳಿದ ಸೋದರಿಯರೊಂದಿಗೂ ಮಾತನಾಡಿದೆ. ನನ್ನ ಸೂಚನೆಗೆ ಅವರು ಒಡನೆ ಒಪ್ಪಿಕೊಂಡು ಸೆರೆಮನೆ ಸೇರಲು ಸಿದ್ಧರಿರುವುದಾಗಿ ತಿಳಿಸಿದರು. ಬೇಕಾದುದಾಗಲಿ, ಪೂರ್ಣ ಅವಧಿಯನ್ನು ಸೆರೆಯಲ್ಲಿ ಕಳೆಯುವುದಾಗಿ ಭರವಸೆ ಇತ್ತರು. ನನ್ನ ಹೆಂಡತಿ ಆ ಸೋದರಿಯರೊಂದಿಗೆ ನಡೆದ ಮಾತುಕತೆಯನ್ನು ಹೊಂಚು ಹಾಕಿ ಕೇಳಿ 'ಇದನ್ನು ಕುರಿತು ನನ್ನಲ್ಲಿ ನೀವು ಏನನ್ನೂ ಹೇಳಲಿಲ್ಲ. ಈ ಸತ್ಕಾರ್ಯಕ್ಕೆ ನಾನು ಅಯೋಗ್ಯಳೇ? ನೀವು ಇತರರಿಂದ ಕೋರುವ ಕೆಲಸವನ್ನು ನಾನೇಕೆ ಮಾಡಬಾರದು?' ಎಂದಳು. "ನಿನ್ನ ಮನಸ್ಸನ್ನು ನೋಯಿಸಲು ನಾನು ಎಂದಿಗೂ ಬಯಸುವುದಿಲ್ಲವೆಂಬುದನ್ನು ನೀನು ಬಲ್ಲೆ. ನಿನ್ನಲ್ಲಿ ಅಪನಂಬಿಗೆ ಏನೂ ಇಲ್ಲ. ನೀನು ಸೆರೆಮನೆ ಸೇರಿದರೆ ನನಗೆ ಸಂತೋಷವಾಗದೆ ಉಂಟೆ? ಆದರೆ ಅದು ನನ್ನ ಪ್ರೇರಣೆಯ ಫಲವಾಗಬಾರದು. ಇಂತಹ ವಿಷಯದಲ್ಲಿ ತನ್ನ ಯೋಗ್ಯತೆ, ಧೈರ್ಯಗಳೇ ತನ್ನ ಬಲವಾಗಬೇಕು. ನನ್ನ ಪ್ರೋತ್ಸಾಹ ನಿನಗೆ 'ಹೇಳಿಕೊಟ್ಟ ಮಾತು, ಕಟ್ಟಿಕೊಟ್ಟ ಬುತ್ತಿ' ಆಗಬಾರದು. ನ್ಯಾಯಸ್ಥಾನದಲ್ಲಿ ನೀನು ನಡುಗತೊಡಗಿದರೆ, ಅಥವಾ ಸೆರೆಮನೆಯ ಕಷ್ಟಗಳಿಗೆ ಹೆದರಿಬಿಟ್ಟರೆ, ಅದು ನಮ್ಮಿಬ್ಬರಿಗೂ ದೊಡ್ಡ ಆಘಾತ; ಕಾರ್ಯಕ್ಕೂ ಅಷ್ಟೆ" ಎಂದೆ ನಾನು. ಅವಳು ಆಗ 'ಸೆರೆಮನೆಯ ಕಷ್ಟಕ್ಕೆ ಹಣ್ಣಾಗಿ ನಾನು ಕ್ಷಮೆಕೇಳಿ ಹೊರಗೆ ಬಂದರೆ ನನ್ನ ಸಂಬಂಧವನ್ನೆ ಕಡಿದುಕೊಂಡು ಬಿಡಬಹುದು. ನೀವೂ ಮಕ್ಕಳೂ ಕಷ್ಟ ಸಹಿಸುತ್ತಿರುವಾಗ ನಾನು ಮಾತ್ರ ಸಹಿಸಲಾರೆನೆ? ಸತ್ಯಾಗ್ರಹದಲ್ಲಿ ನಾನೂ ಖಂಡಿತವಾಗಿ ಸೇರುವವಳೇ' ಎಂದು ಸ್ಪಷ್ಟವಾಗಿ ಹೇಳಿದಳು. 'ಹಾಗಾದರೆ ನಿನ್ನನ್ನು ಸೇರಿಸಿಕೊಳ್ಳಲೇಬೇಕು. ಆದರೆ ನಿನಗೆ ನನ್ನ ಕರಾರೂ ಗೊತ್ತಿದೆ, ಸ್ವಭಾವವೂ ಗೊತ್ತಿದೆ. ಬೇಕಾದರೆ ಇನ್ನೊಮ್ಮೆ

ಯೋಚಿಸು. ಚೆನ್ನಾಗಿ ಯೋಚಿಸಿದ ಮೇಲೆ, ಸತ್ಯಾಗ್ರಹದಲ್ಲಿ ಸೇರಬಾರದೆಂದು ತೋರಿದರೆ ಹಾಗೆ ಮಾಡಲು ಅಡ್ಡಿ ಏನೂ ಇಲ್ಲ. ಈಗಲೂ ನಿನ್ನ ನಿಶ್ಚಯ ಬದಲಿಸಿದರೆ ಅದರಲ್ಲಿ ಅವಮಾನವೇನೂ ಇಲ್ಲ.'

ಅವಳು "ಯೋಚನೆಗೆ ಅವಕಾಶವೇ ಇಲ್ಲ. ಈಗಾಗಲೇ ನಿಶ್ಚಯಿಸಿ ಬಿಟ್ಟಿದ್ದೇನೆ" ಎಂದು ತನ್ನ ನಿರ್ಣಯ ಹೇಳಿಬಿಟ್ಟಳು.

ತನ್ನ ನಿರ್ಣಯವನ್ನು ತಾನೇ ಮಾಡಬೇಕೆಂದೂ ಇತರರ ಸಲಹೆ ಯಂತೆ ನಡೆಯಕೂಡದೆಂದೂ ಆಶ್ರಮದೊಳಗಿನ ಪ್ರತಿ ಒಬ್ಬ ಹೆಂಗು ಸಿಗೂ ಗಂಡುಸಿಗೂ ನಾನು ಹೇಳಿದೆ. ಈ ಹೋರಾಟ ಬೇಗ ಮುಗಿ ಯಲಿ ದೀರ್ಘಕಾಲ ನಡೆಯಲಿ, ಫಿನಿಕ್ಸ್ ಆಶ್ರಮ ಅಳಿಯಲಿ ಉಳಿಯಲಿ, ಸೆರೆಮನೆಯಲ್ಲಿ ಬೇನೆಬೀಳಲಿ ಸುಖವಾಗಿರಲಿ, ಮುಂದಿಟ್ಟ ಹೆಜ್ಜೆ ಹಿಂದಿಡಕೂಡದೆಂಬ ಮಾತನ್ನು ಮತ್ತೆ ಮತ್ತೆ, ಹಲವು ತರದಿಂದ ತಿಳಿ ಹೇಳಿದೆ. ಇದಕ್ಕೆ ಎಲ್ಲರೂ ಸಿದ್ಧರಿದ್ದರು. ಈ ಕೂಟದಲ್ಲಿ ಸೇರಿದ ಆಶ್ರಮದ ಹೊರಗಿನವರೆಂದರೆ ಪಾರ್ಸಿ ರುಸ್ತುಂಜಿಯವರು. ಅವರಿಗೆ ಇಂತಹ ಸುದ್ದಿ ಯಾವುದೂ ತಿಳಿಯದಿರುತ್ತಿರಲಿಲ್ಲ. ಕಾಕಾಜಿ ಎಂಬುದು ಅವರಿಗೆ ಸಲಿಗೆ ಯಿಂದ ಕರೆಯುವ ಹೆಸರು. ಈಗಿನಂತಹ ಸಂದರ್ಭದಲ್ಲಿ ಇವರು ಹಿಂದೆ ನಿಲ್ಲುವ ವ್ಯಕ್ತಿಯೆ ಅಲ್ಲ. ನಮ್ಮ ಹೋರಾಟದಲ್ಲಿ ಇವರಿಗೆ ಈಗಾಗಲೆ ಒಮ್ಮೆ ಸೆರೆಮನೆವಾಸವಾಗಿತ್ತು. ಈಗ ಪುನಃ ಒಮ್ಮೆ ಹೋಗಲು ಆತುರರಾಗಿದ್ದರು.

ನಿರೀಕ್ಷೆಯಂತೆ ಎಲ್ಲವೂ ನಡೆಯಿತು. ಸೆರೆಯಾಗುವ ವಿಷಯದಲ್ಲಿ ಟ್ರಾನ್ಸ್‌ವಾಲಿನಲ್ಲಿ ನಿರಾಶರಾದ ಸೋದರಿಯರು ಮರಳಿ ನೇಟಾಲ್ ಪ್ರವೇಶ ಮಾಡಿದರು. ಅಲ್ಲಿಯೂ ಅವರಿಗೆ ಪ್ರತಿಬಂಧಕವಾಗಲಿಲ್ಲ. ಆದ್ದರಿಂದ ನೇರವಾಗಿ ನ್ಯೂಕ್ಯಾಸಲಿಗೆ ಹೋಗಿ ಮೊದಲೇ ನಿಶ್ಚಿತವಾದ ತಮ್ಮ ಕೆಲಸ ದಲ್ಲಿ ತೊಡಗಿದರು. ಅಲ್ಲಿ ಅವರ ಪ್ರಭಾವ ಕಾಡ್ಗಿಚ್ಚಿನಂತೆ ಹಬ್ಬಿತು. ಮೂರು ಪೌಂಡು ತಲೆಗಂದಾಯದ ಅನ್ಯಾಯದ ದಾರುಣ ಕತೆ ಕೂಲಿಕಾರರನ್ನು ಕೆರಳಿಸಿತು. ಅವರು ಕೂಡಲೇ ಸಂಪು ಹೂಡಿದರು.

ಸರಕಾರ ಇಂತಹ ಚಟುವಟಿಕೆ ಸಾಗಿಸಲು ಎಂದಾದರೂ ಬಿಟ್ಟೀತೇ? ಟ್ರಾನ್ಸ್‌ವಾಲಿನ ಈ ಎಲ್ಲ ಶೂರ ಸ್ತ್ರೀಯರಿಗೆ ಮೂರು ತಿಂಗಳು ಶಿಕ್ಷೆ ಯಾಯಿತು.

# ೩೫. ಹೆಂಗುಸರೂ ಧುಮುಕಿದರು —೨

ಹೆಂಗುಸರ ಧೈರ್ಯ ವರ್ಣನಾತೀತವಾಗಿತ್ತು. ಅವರೆಲ್ಲರನ್ನೂ ಮ್ಯಾರಿಜ್‍ಬರ್ಗ್ ಸೆರೆಮನೆಯಲ್ಲಿಟ್ಟಿದ್ದರು. ಅಲ್ಲಿ ಅವರಿಗೆ ಬಹಳ ಹಿಂಸೆ ಕೊಟ್ಟರು. ಅವರ ಆಹಾರ ತೀರ ಕೆಟ್ಟದು. ಮಾಡಬೇಕಾದ ಕೆಲಸ ಮೂಟೆ ಗಟ್ಟಲೆ ಬಟ್ಟೆ ಒಗೆಯುವಂತಹದು. ಶಿಕ್ಷೆಯ ಅವಧಿ ಮುಗಿಯುವ ವರೆಗೂ ಹೊರಗಿನ ಆಹಾರಕ್ಕೆ ಅಪ್ಪಣೆ ಕೊಡಲಿಲ್ಲವೆನ್ನಬಹುದು.

ಕಸ್ತೂರಿಬಾಯಿ ವಿಶಿಷ್ಟ ಆಹಾರವನ್ನೇ ತೆಗೆದುಕೊಳ್ಳುವ ವ್ರತ ಹಿಡಿದಿದ್ದಳು. ಸೆರೆಮನೆಯ ಅಧಿಕಾರಿಗಳಿಂದ ಇದಕ್ಕೆ ಒಪ್ಪಿಗೆ ಪಡೆಯಬೇಕಾದರೆ ಬಹಳ ಕಷ್ಟ ಪಡಬೇಕಾಯಿತು. ಆದರೆ ಅವಳಿಗೆ ಕೊಡುತ್ತಿದ್ದ ಆಹಾರವನ್ನು ತಿನ್ನಲು ಮನುಷ್ಯಮಾತ್ರನಿಂದ ಸಾಧ್ಯವಿರಲಿಲ್ಲ. ಆಕೆಗೆ ಇಪ್ಪೆ ಎಣ್ಣೆ ಬೇಕಾಗಿದ್ದಿತು. ಮೊದಲು ಅದನ್ನು ಕೊಡಲೇ ಇಲ್ಲ. ಆಮೇಲೇನೋ ಕೊಟ್ಟರು. ಆದರೆ ಅದು ಹಳಕಲು, ಕಮಟು. ಸ್ವಂತ ಹಣ ಕೊಟ್ಟು ತರಿಸುವುದಾಗಿ ಆಕೆ ಹೇಳಿದಾಗ 'ಸೆರೆಮನೆಯೆಂದರೆ ಹೋಟೆಲ್ ಅಲ್ಲ. ಕೊಟ್ಟ ಆಹಾರವನ್ನೇ ತೆಗೆದುಕೊಳ್ಳಬೇಕು' ಎಂದು ಉತ್ತರ ಬಂತು. ಬಿಡುಗಡೆಯಾದಾಗ ಅವಳ ಮೈಯಲ್ಲಿದ್ದುದು ಎಲುಬಿನ ಗೂಡು ಮಾತ್ರ. ಆಕೆಯನ್ನು ಉಳಿಸಿಕೊಳ್ಳಬೇಕಾದರೆ ಬಹಳ ಕಷ್ಟಪಡಬೇಕಾಯಿತು.

ಒಬ್ಬ ಹೆಂಗುಸಿಗೆ ಸೆರೆಮನೆಯಿಂದ ಬರುತ್ತಿರುವಾಗಲೇ ಘೋರ ಜ್ವರ ಅಂಟಿಕೊಂಡಿತ್ತು. ಬಿಡುಗಡೆಯಾದ ತುಸುದಿನಗಳಲ್ಲಿ–೧೯೧೪ನೆಯ ಫೆಬ್ರುವರಿ ೨೨ಕ್ಕೆ–ಅವಳು ಅದಕ್ಕೆ ತುತ್ತಾದಳು. ಇವಳನ್ನು ಮರೆಯುವುದು ಸಾಧ್ಯವೆ? ಇವಳು ಜೋಹಾನ್ಸ್‌ಬರ್ಗಿನವಳು; ಬರಿಯ ಹದಿನಾರು ವರುಷದ ಎಳೆಯ ಹುಡುಗಿ. ಹೆಸರು ವಾಲಿಯಮ್ಮ ಆರ್. ಮುನಿಸ್ವಾಮಿ ಮೊದಲಿಯಾರ್. ನಾನು ಅವಳನ್ನು ಕಂಡಾಗ ಹಾಸಿಗೆ ಹಿಡಿದಿದ್ದಳು. ಒಳ್ಳೇ ಎತ್ತರವಾದ ಆಳಾದುದರಿಂದ ಸೊರಗಿ ಬಡಕಲಾದ ಅವಳ ದೇಹವನ್ನು ನೋಡುವುದು ಸಾಧ್ಯವಿರಲಿಲ್ಲ.

"ಸೆರೆಮನೆಗೆ ಹೋದುದಕ್ಕಾಗಿ ನಿನಗೆ ಪಶ್ಚಾತ್ತಾಪವಾಗುವುದಿಲ್ಲವೇ, ವಾಲಿಯಮ್ಮ?" ಎಂದು ನಾನು ಕೇಳಿದೆ.

"ಪಶ್ಚಾತ್ತಾಪ? ಸೆರೆಹಿಡಿದರೆ ಈಗಲೂ ಹೋಗಲು ಸಿದ್ಧಳಿದ್ದೇನೆ."

"ಅಲ್ಲಿಯೆ ಸಾಯಬೇಕಾಗಿ ಬಂದರೆ?"—ನಾನು ಮತ್ತೆ ಕೇಳಿದೆ.

"ಅದೇನು ದೊಡ್ಡ ವಿಷಯ? ತಾಯ್ನಾಡಿಗಾಗಿ ಸಾವನ್ನು ಅಪ್ಪಿಕೊಳ್ಳದವರಾರು?"

ಮುಂದೆ ಕೆಲವೇ ದಿನಗಳಲ್ಲಿ ವಾಲಿಯಮ್ಮನ ದೇಹವೇನೋ ಅಳಿಯಿತು. ಆದರೆ ಅವಳ ಹೆಸರು ಮಾತ್ರ ಚಿರಸ್ಮರಣೀಯವಾಗಿ ಉಳಿಯಿತು.

ಈ ಎಲ್ಲ ಸೋದರಿಯರ ತ್ಯಾಗ ಅತಿ ಪರಿಶುದ್ಧವಾದುದು. ತ್ಯಾಗ ಎಷ್ಟು ಶುದ್ಧವಾಗಿರುವುದೊ ಅಷ್ಟು ಫಲವೂ ಹತ್ತಿರ ಬರುವುದು. ದೇವರು ಯಾವಾಗಲೂ ಮಾನವಹೃದಯದೊಳಗಿನ ಭಕ್ತಿಗೆ ಹಂಬಲಿಸುತ್ತಾನೆ. ಒಬ್ಬ ಗತಿಗೇಡಿ ವಿಧವೆ ಅರ್ಪಣಬುದ್ಧಿಯಿಂದ, ನಿಸ್ವಾರ್ಥಳಾಗಿ, ಅರ್ಪಿಸಿದ ಅಣುಮಾತ್ರವನ್ನೂ ಆವನು ಬಹಳ ಸಂತೋಷದಿಂದ ಸ್ವೀಕರಿಸಿ ಅದಕ್ಕೆ ನೂರುಮಡಿ ಪ್ರತಿಫಲ ಕೊಡುತ್ತಾನೆ. ಕಡುಬಡವನಾದ ಸುದಾಮನು ಅರ್ಪಿಸಿದ ಹಿಡಿ ಅವಲಕ್ಕಿಯಿಂದ ಅವನ ಬಡತನವೇ ಇಂಗಿಹೋಗಲಿಲ್ಲವೆ? ಎಷ್ಟೋ ಜನರ ಸೆರೆಮನೆಯ ವಾಸ ನಿಷ್ಫಲವಾಗಿರಬಹುದು. ಆದರೆ ಒಬ್ಬನೇ ಒಬ್ಬ ಶುದ್ಧಾತ್ಮನ ಪವಿತ್ರತ್ಯಾಗ ಎಂದೆಂದಿಗೂ ವ್ಯರ್ಥವಾಗದು. ದಕ್ಷಿಣ ಆಫ್ರಿಕೆಯೊಳಗಿನ ಉಳಿದ ಯಾವ ತ್ಯಾಗ ದೇವರಿಗೆ ಪ್ರಿಯವಾಯಿತು ಎಂಬುದನ್ನು ಯಾರೂ ಹೇಳಲಾರರು. ಆದರೆ ವಾಲಿಯಮ್ಮನ ತ್ಯಾಗ ಮಾತ್ರ ಖಂಡಿತವಾಗಿಯೂ ಪ್ರಿಯವಾಯಿತೆಂದು ನಾನು ಹೇಳಬಲ್ಲೆ.

ದೇಶಸೇವೆಗಾಗಿ, ಮಾನವಸೇವೆಗಾಗಿ, ಎಷ್ಟೋ ಮಹಾನುಭಾವರು ಹಿಂದೆ ಆತ್ಮತ್ಯಾಗ ಮಾಡಿದ್ದಾರೆ, ಈಗ ಮಾಡುತಿದ್ದಾರೆ, ಮುಂದೆಯೂ ಮಾಡುವುದರಲ್ಲಿ ಸಂದೇಹವಿಲ್ಲ. ಇವರೆಲ್ಲರೂ ತ್ಯಾಗಿಗಳೆಂಬುದಂತೂ ಸರಿಯೆ ಸರಿ. ಆದರೆ ಇವರ ಉದ್ದೇಶ ಪವಿತ್ರವೊ ಅಲ್ಲವೊ ಹೇಳುವುದು ಕಷ್ಟ. ಧ್ಯೇಯಸಾಧನೆಗೆ ತಮ್ಮಲ್ಲಿ ಸ್ಫಟಿಕದಂತೆ ಪರಿಶುದ್ಧನಾದ ಒಬ್ಬನೇ ಇದ್ದರೂ ಸಾಕೆಂದು ಸತ್ಯಾಗ್ರಹಿಗಳು ಚೆನ್ನಾಗಿ ತಿಳಿಯಲಿ. ಸತ್ಯದ ತಳಹದಿಯ ಮೇಲೆಯೆ ಪ್ರಪಂಚ ನಿಂತಿದೆ. ಸತ್ಯದ ಅಕ್ಷರಶಃ ಅರ್ಥವೆಂದರೆ 'ಇದ್ದದ್ದು.' ಅಸತ್ಯವೆಂದರೆ 'ಇಲ್ಲದ್ದು.' ಅದಕ್ಕೆ ಅಸ್ತಿತ್ವವೇ ಇಲ್ಲವೆಂದ ಮೇಲೆ ಅದರ ಗೆಲುವೆಂಬುದು ಮರಣವೇ. ಯಾವಾಗಲೂ ಇರುವಂತಹದೇ ಸತ್ಯ

ವಾದ್ದರಿಂದ ಅದಕ್ಕೆ ನಾಶವೆಂಬುದಿಲ್ಲ. ಅದು ಸದಾ ವಿಜಯಿ. ಸತ್ಯಾಗ್ರಹದ ಸಂಕ್ಷೇಪವಾದ ಸಿದ್ಧಾಂತ ಇದೇ.

## ೩೬. ಕೂಲಿಕಾರರೂ ಕೂಡಿಕೊಂಡರು

ಹೆಂಗುಸರ ಸೆರೆಮನೆಯ ವಾಸದಿಂದ ನ್ಯೂಕಾಸಲ್ ಕಣಿಗಳ ಕೂಲಿಕಾರರೆಲ್ಲ ಮಂತ್ರಮುಗ್ಧರಾದರು. ಅವರು ತಮ್ಮ ಕಸುಬಿನ ಉಪಕರಣಗಳನ್ನು ಕೆಳಗಿಟ್ಟು ಗುಂಪುಗುಂಪಾಗಿ ನ್ಯೂಕಾಸಲ್ ಕಡೆಗೆ ಹೋಗತೊಡಗಿದರು. ಈ ಸುದ್ದಿ ತಿಳಿದಕೂಡಲೆ ನಾನು ಫಿನಿಕ್ಸಿನಿಂದ ನ್ಯೂಕ್ಯಾಸಲಿಗೆ ಹೋದೆ.

ಈ ಕೂಲಿಕಾರರಿಗೆ ಸ್ವಂತ ಮನೆಗಳಿರಲಿಲ್ಲ. ಕಣಿಗಳ ಒಡೆಯರು ಇವರಿಗಾಗಿ ಗುಡಿಸಲುಗಳನ್ನು ಕಟ್ಟಿಸಿದ್ದರು. ಇವರಿಗೆ ನೀರು, ದಾರಿಯ ಬೆಳಕು ಒದಗಿಸುವ ಹೊಣೆಯೂ ಈ ಒಡೆಯರದೇ. ಹೀಗೆ ಈ ಕೂಲಿಕಾರರು ಸಂಪೂರ್ಣ ಪರಾವಲಂಬಿಗಳಾಗಿದ್ದರು.

ಸಂಪುಗಾರರು ದೂರುಗಳ ಒಂದು ದೊಡ್ಡ ಪಟ್ಟಿಯನ್ನೇ ನನ್ನಲ್ಲಿ ತಂದರು. ದೀಪ, ನೀರು ನಿಲ್ಲಿಸಿರುವುದಾಗಿ ಕೆಲವರು, ಮುಷ್ಕರ ಹಿಡಿದುದಕ್ಕಾಗಿ ತಮ್ಮ ಗಡಿಗೆ ಮಡಿಕೆಯನ್ನು ಹೊರಗೆ ಹಾಕಿರುವುದಾಗಿ ಕೆಲವರು ಹೇಳಿದರು. ಸಯ್ಯದ್ ಇಬ್ರಾಹಿಮ್– ಒಬ್ಬ ಪಠಾಣ–ತನ್ನ ಬೆನ್ನು ತೋರಿಸಿ 'ಇಲ್ಲಿ ನೋಡಿರಿ, ಎಷ್ಟು ಜೋರಿನಿಂದ ಹೊಡೆದಿದ್ದಾರೆ. ನಾನು ಈ ನೀಚರನ್ನು ಬಿಟ್ಟದ್ದು ನಿಮ್ಮ ಮುಖ ನೋಡಿ. ನಿಮ್ಮ ಅಪ್ಪಣೆ ಹಾಗಿದೆ. ಪಠಾಣರಿಗೆ ಹೊಡೆತ ಕೊಡುವುದು ಮಾತ್ರ ಗೊತ್ತು; ತಿನ್ನುವುದು ಗೊತ್ತಿಲ್ಲ' ಎಂದ.

"ಅದೀಗ ಒಳ್ಳೇ ಕೆಲಸ. ಇಂತಹ ತಾಳ್ಮೆಯೆ ನಿಜವಾದ ಎದೆಗಾರಿಕೆ. ನಿನ್ನಂತಹ ಜನರಿಂದ ಮಾತ್ರ ನಮಗೆ ಗೆಲುವು ಸಿಗಬಲ್ಲುದು" ಎಂದೆ ನಾನು.

ಕೂಲಿಕಾರರ ಸಂಖ್ಯೆ ನೂರಾರು. ಸಾವಿರಾರು ಎಂದರೂ ಅಡ್ಡಿ ಇಲ್ಲ. ಇಂತಹ ದೊಡ್ಡ ಜನಜಂಗುಳಿಗೆ ಊಟಕ್ಕೂ ವಸತಿಗೂ ಎಲ್ಲಿಂದ ಒದಗಿಸಲಿ?

ಈ ಸಮಸ್ಯೆಗೆ ಒಂದು ಹಂಚಿಕೆ ತೋರಿತು— ಫಿನಿಕ್ಸ್ ಜನರಂತೆ ಇವರನ್ನೂ ಟ್ರಾನ್ಸ್‌ವಾಲಿಗೆ ಕರೆದೊಯ್ದು, ಅವರು ನೇರವಾಗಿ ಸೆರೆಮನೆ ಸೇರು

ವಂತೆ ನೋಡಿಕೊಳ್ಳುವುದು. ಕೂಲಿಕಾರರ ಈ ಜನಜಂಗುಳಿ ಸುಮಾರು ೫೦೦೦ ದ ವರೆಗೆ ಒಟ್ಟುಗೂಡಿತ್ತು. ಇಷ್ಟು ದೊಡ್ಡ ಜನಸಮುದಾಯಕ್ಕೆ ರೈಲು ವೆಚ್ಚಕ್ಕೆ ಕೊಡಲು ನನ್ನಲ್ಲಿ ಹಣವಿರಲಿಲ್ಲ. ಆದ್ದರಿಂದ ಇವರನ್ನು ಉಗೆ ಬಂಡಿಯಿಂದ ಕಳಿಸುವುದು ಅಸಾಧ್ಯವಾದ ಮಾತು. ಒಂದು ವೇಳೆ ಸಾಧ್ಯ ವಿದ್ದರೂ ಅವರ ನೈತಿಕಬಲ ಒರೆಗೆ ಹಚ್ಚುವ ಸಂದರ್ಭ ಮತ್ತೊಮ್ಮೆ ದೊರಕುವುದೆ? ನ್ಯೂಕ್ಯಾಸಲಿನಿಂದ ಟ್ರಾನ್ಸ್‌ವಾಲ್ ಎಲ್ಲೆಗೆ ೩೬ ಮೈಲು. ಚಾರ್ಲ್ಸ್‌ಟೌನ್ ಮತ್ತು ವಾಕ್ಸ್‌ರಸ್ಟ್, ಎರಡೂ ಹತ್ತಿರದ ಹಳ್ಳಿಗಳು. ಕ್ರಮವಾಗಿ ಒಂದು ನೇಟಾಲಿಗೆ ಸೇರಿದ್ದು, ಇನ್ನೊಂದು ಟ್ರಾನ್ಸ್‌ವಾಲಿಗೆ ಸೇರಿದ್ದು. ಕಟ್ಟಕಡೆಗೆ, ನಡಿಗೆಯಿಂದಲೇ ಹೊರಡುವುದೆಂದು ನಾನು ನಿಶ್ಚ ಯಿಸಿದೆ. ಇದರ ಬಗೆಗೆ, ಜೊತೆಗೆ ಹೆಂಡಿರು ಮಕ್ಕಳು ಬಂದಿದ್ದ ಕೂಲಿ ಕಾರರ ಅಭಿಪ್ರಾಯ ಕೇಳಿದೆ. ಅವರಲ್ಲಿ ಕೆಲವರು ನನ್ನ ಸೂಚನೆಗೆ ಹಿಂಜ ರಿಯತೊಡಗಿದರು. ಮನಸ್ಸು ಕಲ್ಲುಮಾಡುವ ಹೊರತು ನನಗೆ ಬೇರೆ ಹಾದಿಯೇ ಇರಲಿಲ್ಲ. ಆದ್ದರಿಂದ ಮನಸ್ಸಿಲ್ಲದವರು ಕಣಿಗಳಿಗೆ ಹಿಂದಿರುಗಲು ಅಡ್ಡಿ ಇಲ್ಲವೆಂದು ತಿಳಿಸಿದೆ. ಆದರೆ ಈ ಸೌಕರ್ಯವನ್ನು ಉಪಭೋಗಿಸಲು ಯಾರೂ ಮುಂದೆಬರಲಿಲ್ಲ. ಅಶಕ್ತರನ್ನು ಉಗೆಬಂಡಿಯಿಂದ ಕಳಿಸುವು ದೆಂದು ನಾವು ಗೊತ್ತುಮಾಡಿದೆವು. ಕಟ್ಟಾಳುಗಳೆಲ್ಲ ಚಾರ್ಲ್ಸ್‌ಟೌನಿಗೆ ನಡಿಗೆಯಿಂದ ಹೋಗುವುದಾಗಿ ಒಪ್ಪಿದರು. ಈ ಪ್ರಯಾಣ ಎರಡು ದಿನ ಗಳಲ್ಲಿ ಮುಗಿಯಬೇಕಾಗಿತ್ತು. ಅಂತೂ ಈ ನಡಿಗೆ ಕೈಕೊಂಡ ಬಗೆಗೆ ಎಲ್ಲ ರಿಗೂ ಸಂತೋಷವಾಯಿತು. ನಮ್ಮಿಂದ ಗಂಟುಬೇನೆ ಬರಬಹುದೆಂದು ಹೆದರಿ ನ್ಯೂಕ್ಯಾಸಲಿನ ಐರೋಪ್ಯರು ಅದನ್ನು ತಡೆಯಲು ಎಲ್ಲ ಹಂಚಿಕೆಗಳನ್ನೂ ಕೈಕೊಳ್ಳುವ ಹವಣಿಕೆಯಲ್ಲಿದ್ದರು. ನಾವು ಮುಂದೆ ಸಾಗಿ ಅವರ ಮನಸ್ಸಿಗೂ ನೆಮ್ಮದಿ ತಂದೆವು; ಅವರು ಕೊಡಬಹುದಾದ ತೊಂದರೆಗಳಿಂದ ನಾವೂ ತಪ್ಪಿಸಿಕೊಂಡೆವು.

ದಂಡಯಾತ್ರೆಯ ಸಿದ್ಧತೆಯಲ್ಲಿರುವಾಗಲೇ ಕಣಿಗಳ ಒಡೆಯರನ್ನು ಕಾಣಲು ನನಗೆ ಆಹ್ವಾನ ಬಂದಿತು. ಆದ್ದರಿಂದ ನಾನು ಡರ್ಬನ್ನಿಗೆ ಹೋದೆ. ಆದರೆ ತಮ್ಮ ಕಣಿಗೂ ಮೂರು ಪೌಂಡು ಕಂದಾಯಕ್ಕೂ ಸಂಬಂಧವಿಲ್ಲ ವೆಂದು ಅವರು ಹೇಳಿಬಿಟ್ಟರು. ಆದ್ದರಿಂದ ಈ ತೆರಿಗೆ ತೆಗೆದೊಗೆಯುವಂತೆ

ಸರಕಾರಕ್ಕೆ ಬಿನ್ನವಿಸಿಕೊಳ್ಳಲು ಅವರ ಮನವೊಲಿಸುವುದು ನನ್ನಿಂದ ಸಾಧ್ಯವಾಗಲಿಲ್ಲ.

ಅಂತೂ ನಾನು ನ್ಯೂಕ್ಯಾಸಲಿಗೆ ಮರಳಿ ಬಂದುಬಿಟ್ಟೆ. ಕೂಲಿಕಾರರು ನಾಲ್ಕೂ ಸಿಟ್ಟಿನಿಂದ ಇನ್ನೂ ಮುಕುರುತ್ತಲಿದ್ದರು. ಎಲ್ಲ ಜನರಿಗೂ ಪರಿಸ್ಥಿತಿಯನ್ನೆಲ್ಲ ವಿವರಿಸಿದೆ. ಇಷ್ಟವಿದ್ದರೆ ಈಗಲೂ ಕೆಲಸಕ್ಕೆ ಹೋಗಬಹುದೆಂದು ಹೇಳಿದೆ. ಕಣಿಗಳ ಒಡೆಯರು ಹೆದರಿಕೆ ತೋರಿಸುವುದನ್ನೂ ಮುಂದೆ ಒದಗಬಹುದಾದ ಕಷ್ಟಗಳನ್ನೂ ಚಿತ್ರಿಸಿದೆ. ಈ ಹೋರಾಟದ ಕೊನೆ ಯಾವಾಗ ಎಂದು ಹೇಳುವುದು ಯಾರಿಗೂ ಸಾಧ್ಯವಿಲ್ಲವೆಂದು ತಿಳಿಸಿದೆ. ಸೆರೆಮನೆಯ ಕಷ್ಟನಷ್ಟಗಳನ್ನೆಲ್ಲ ಬಣ್ಣಿಸಿದೆ. ಆದರೆ ಯಾರೂ ಹಿಮ್ಮೆಟ್ಟಲಿಲ್ಲ. 'ನೀವು ಹೋರಾಟದಲ್ಲಿ ನಮ್ಮ ಜೊತೆಗೆ ಇರುವ ವರೆಗೆ ನಾವು ಎಂದಿಗೂ ಹೆದರುವುದಿಲ್ಲ. ಕಷ್ಟಪಡುವುದು ನಮಗೆ ಅಭ್ಯಾಸವಾಗಿರುವುದರಿಂದ ಆ ವಿಷಯದಲ್ಲಿ ನೀವು ಯೋಚಿಸಬೇಕಾದುದಿಲ್ಲ' ಎಂದು ಅವರು ಧೈರ್ಯವಾಗಿ ಹೇಳಿದರು.

ಇನ್ನು ಉಳಿದುದು ಮಹಾಯಾತ್ರೆಯ ಆರಂಭ ಮಾತ್ರ. ಮರುಮುಂಜಾನೆಯೇ—೧೯೧೩ನೆ ಅಕ್ಟೋಬರ್ ೨೮–ಪ್ರಯಾಣಕ್ಕೆ ಸಿದ್ಧರಾಗಿರಬೇಕೆಂದು ಒಂದು ದಿನ ಸಂಜೆ ಎಲ್ಲ ಕೂಲಿಕಾರರಿಗೂ ತಿಳಿಸಿದೆವು. ದಾರಿಯಲ್ಲಿ ಪಾಲಿಸತಕ್ಕ ನಿಯಮಗಳನ್ನೂ ಓದಿ ಹೇಳಲಾಯಿತು. ಐದಾರು ಸಾವಿರ ಜನರ ಮಹಾ ಸಮುದಾಯವನ್ನು ಅಂಕೆಯಲ್ಲಿಡುವುದು ಹುಡುಗಾಟವಲ್ಲ. "ದಾರಿಯಲ್ಲಿ ಒಬ್ಬೊಬ್ಬರಿಗೆ ದಿನಕ್ಕೆ ೧½ ಪೌಂಡು ರೊಟ್ಟಿ ೨½ ತೊಲೆ ಸಕ್ಕರೆಗಿಂತ ಹೆಚ್ಚು ಏನು ಕೊಡುವುದೂ ಸಾಧ್ಯವಿಲ್ಲ. ಹಿಂದೀ ವ್ಯಾಪಾರಿಗಳಿಂದ ಹೆಚ್ಚಿಗೆ ಏನಾದರೂ ದೊರಕಿಸಲು ಹಾದಿಯಲ್ಲಿ ಯತ್ನಿಸುವುದು ನನ್ನ ಕೆಲಸ. ಸಿಕ್ಕದಿದ್ದರೆ ಅಷ್ಟರಲ್ಲೇ ತೃಪ್ತರಾಗಿರಬೇಕು" ಎಂದು ಅವರಿಗೆ ತಿಳಿಸಿದೆ. ಬೋಯರ್ ಯುದ್ಧದಲ್ಲಿಯೂ ಝುಲು 'ಬಂಡಾಯ'ದಲ್ಲಿಯೂ ಸಿಕ್ಕ ಅನುಭವ ಈಗ ನನಗೆ ಬಹಳ ಅನುಕೂಲವಾಯಿತು. "ಅಗತ್ಯಕ್ಕಿಂತ ಹೆಚ್ಚು ಬಟ್ಟೆ ತರಕೂಡದು. ದಾರಿಯಲ್ಲಿ ಇನ್ನೊಬ್ಬರ ಸಾಮಾನು ಯಾರೂ ಮುಟ್ಟಕೂಡದು. ಯಾವನೊಬ್ಬ ಯುರೋಪಿಯನ್ ಅಧಿಕಾರಿಯಾಗಲಿ ನಾಗರಿಕನಾಗಲಿ ಬಂದು ಬೈದರೆ, ಹೊಡೆದರೂ ಕೂಡ, ತಾಳ್ಮೆಯಿಂದ ಸಹಿಸಬೇಕು. ಸೆರೆಹಿಡಿಯಲು ಪೋಲೀಸರು ಬಂದರೆ ಅಡ್ಡಿ ಮಾಡಕೂಡದು.

ನನ್ನನ್ನು ಬಂಧಿಸಿದರೂ ದಂಡಯಾತ್ರೆ ಮುಂದುವರಿಯಬೇಕು." ಈ ಎಲ್ಲ ಮಾತನ್ನು ವಿವರಿಸಿ, ನನ್ನ ಸೆರೆಯಾದರೆ ನನ್ನ ಬದಲಾಗಿ ಯಾರು ಯಾರು ಮುಂದಾಳಾಗುವರೆಂದೂ ತಿಳಿಸಿದೆ.

ಜನರು ಎಲ್ಲ ಸೂಚನೆಗಳನ್ನು ಸರಿಯಾಗಿ ತಿಳಿದುಕೊಂಡರು. ಅಂತೂ ನಮ್ಮ ಈ ಶಾಂತಿಸೈನ್ಯ ಸುರಕ್ಷಿತವಾಗಿ ಚಾರ್ಲ್ಸ್‌ಟೌನ್ ಸೇರಿತು. ಅಲ್ಲಿಯ ವ್ಯಾಪಾರಿಗಳು ನಮಗೆ ಬಹಳ ನೆರವಾದರು. ನಮಗೆ ಇರಲು ಮನೆಗಳನ್ನು ಕೊಟ್ಟರು. ಮಸೀದೆಗಳಲ್ಲಿ ಅಡಿಗೆ ಮಾಡಿಕೊಳ್ಳಲು ಒಪ್ಪಿಗೆಕೊಟ್ಟರು. ನಮ್ಮಲ್ಲಿ ಆಹಾರ ಸಾಮಗ್ರಿ ಚಾರ್ಲ್ಸ್‌ಟೌನ್ ಸೇರುವ ವರೆಗೆ ಮಾತ್ರ ಇತ್ತು. ಅಲ್ಲಿ ನಾವು ಕೆಲವು ದಿನ ತಂಗಬೇಕಾಯಿತು. ಆದ್ದರಿಂದ ಅಡಿಗೆಯ ಪಾತ್ರೆಗಳು ಅನಿವಾರ್ಯವಾಯಿತು. ಅವನ್ನೆಲ್ಲ ಅಲ್ಲಿಯ ವರ್ತಕರು ಕೊಟ್ಟರು. ನಮ್ಮಲ್ಲಿ ಅಕ್ಕಿಯೂ ಇತರ ಸಾಮಗ್ರಿಯೂ ಬೇಕಾದಷ್ಟಿತ್ತು. ಈ ಬಣಜಿಗರೂ ಕೊಟ್ಟದ್ದರಿಂದ ಇನ್ನಷ್ಟು ಹೆಚ್ಚಾಯಿತು.

ಚಾರ್ಲ್ಸ್‌ಟೌನ್ ೧೦೦೦ ಜನಸಂಖ್ಯೆಯ ಚಿಕ್ಕ ಹಳ್ಳಿ. ಈ ಸಾವಿರಾರು ಜನರಿಗೆ ಅದೆಲ್ಲಿ ಸಾಕಾಗಬೇಕು ? ಆದ್ದರಿಂದ ಹೆಂಗಸರು ಮಕ್ಕಳನ್ನು ಮನೆಗಳಲ್ಲಿ ಬಿಟ್ಟು ಉಳಿದವರು ಬೈಲಿನಲ್ಲಿ ತಂಗಿದರು.

ಜನರು ಸ್ವಚ್ಛವಾಗಿರುವಂತೆ ಮಾಡಲು ಬಹಳ ಕಷ್ಟಪಡಬೇಕಾಯಿತು. ನನ್ನ ಸಂಗಡಿಗ–ಕೆಲಸಗಾರರು ನನ್ನ ಈ ಕೆಲಸವನ್ನು ಹಗುರ ಮಾಡಿದರು. ಮುಂದಾಳು ಬರಿಯ ಅಪ್ಪಣೆ ಕೊಡುವ ಬದಲು ತಾನೇ ಕೆಲಸ ಮಾಡತೊಡಗಿದರೆ ಬಹಳ ಒಳ್ಳೇ ಪರಿಣಾಮವಾಗುವುದೆಂದು ನನ್ನ ಅನುಭವ. ಅವನೇ ಕೆಲಸ ಮಾಡತೊಡಗಿದರೆ ಉಳಿದವರೂ ಅವನನ್ನು ಹಿಂಬಾಲಿಸುತ್ತಾರೆ. ಈ ಸಂದರ್ಭದಲ್ಲಂತೂ ನನ್ನ ಅನುಭವ ಇದ್ದದ್ದು ಹೀಗೆಯೇ. ಗುಡಿಸುವ, ಕಕ್ಕಸ ಬಳಿಯುವ ಮತ್ತು ಇಂತಹ ಇತರ ಕೆಲಸಗಳನ್ನು ಮಾಡಲು ನಾನೂ ಜೊತೆಕೆಲಸಗಾರರೂ ಎಂದಿಗೂ ಹಿಂದೆಗೆಯಲಿಲ್ಲ. ಇದರಿಂದ ಉಳಿದವರೂ ಈ ಕೆಲಸಕ್ಕೆ ಉತ್ಸಾಹದಿಂದ ಮುಂದೆಬಂದರು. ತಾನು ಕೆಲಸಕ್ಕೆ ಹಿಂದೇಟು ಕೊಟ್ಟು ಉಳಿದವರಿಗೆ ಅಪ್ಪಣೆ ಕೊಡುವುದರಿಂದ ಪ್ರಯೋಜನವಿಲ್ಲ. ಎಲ್ಲರೂ ಮುಂದಾಳಾಗಿ ಇತರರಿಗೆ ಅಪ್ಪಣೆ ಕೊಡುತ್ತ ಹೋದರೆ ಕೆಲಸ ಕೊನೆಗೊಳ್ಳುವುದಿಲ್ಲ. ನಾಯಕನೇ ಸೇವಕನಾದರೆ ಮುಂದಾಳುತನಕ್ಕೆ ಮೇಲಾಟವೆಲ್ಲಿಯದು?

ನಾವು ಕೊಡುತಿದ್ದುದು ಅನ್ನ, ಹುಳಿ. ಕಾಯಿಪಲ್ಯವೇನೊ ನಮ್ಮಲ್ಲಿ ಬೇಕಾದಷ್ಟಿತ್ತು. ಆದರೆ ಪಾತ್ರೆ ಮತ್ತು ವೇಳೆಯ ಕೊರತೆಯಿಂದ ಬೇರೆಯಾಗಿ ಬೇಯಿಸುತ್ತಿರಲಿಲ್ಲ; ಬೇಳೆಯಲ್ಲೇ ಕೂಡಿಸಿಬಿಡುತಿದ್ದೆವು. ಹೊಸ ಜನರು ಗಣಿಗಳಿಂದ ಹಗಲೂ ರಾತ್ರಿಯೂ ಹಸಿದು ಬರುತಿದ್ದರು. ಆದ್ದರಿಂದ ಅಡಿಗೆಮನೆಗೆ ಇಪ್ಪತ್ತನಾಲ್ಕು ಗಂಟೆಯೂ ಬಿಡುವಿರುತ್ತಿರಲಿಲ್ಲ. ಪ್ರತಿಒಬ್ಬ ಕೂಲಿಗೂ ಹಾದಿ ಗೊತ್ತಿದ್ದುದರಿಂದ ಕಣಿಗಳಿಂದ ಹೊರಟವರು ನೇರವಾಗಿ ಚಾರ್ಲ್ಸ್‌ಟೌನಿಗೇ ಬರುತಿದ್ದರು. ಯಾರೂ ನ್ಯೂಕ್ಯಾಸಲಿನಲ್ಲಿ ನಿಲ್ಲುತ್ತಿರಲಿಲ್ಲ.

ಈ ಸ್ತ್ರೀ ಪುರುಷರ ಶಾಂತತೆಯನ್ನೂ ತಾಳ್ಮೆಯನ್ನೂ ನೆನೆದುಕೊಂಡರೆ ದೇವರು ದೊಡ್ಡವನೆಂಬ ಭಾವನೆ ಮನಸ್ಸಿನಲ್ಲಿ ತಾನಾಗಿ ತುಂಬಿ ಬಿಡುತ್ತದೆ. ನಾನೇ ಅಡಿಗೆಯ ಮುಖ್ಯಸ್ಥನಾಗಿದ್ದೆ. ಒಮ್ಮೊಮ್ಮೆ ಹುಳಿ ಬರೇ ನೀರಾಗಿ ಬಿಡುತಿತ್ತು; ಇಲ್ಲವಿದ್ದರೆ ಬೇಳೆಯೆ ಬೇಯುತ್ತಿರಲಿಲ್ಲ. ಒಂದೊಂದು ಸಲ ಅನ್ನವೂ ಅಷ್ಟೇ, ಕಾಯಿಪಲ್ಯವೂ ಅಷ್ಟೆ; ಹೆಚ್ಚಾಗಿ ಬೆಂದು ಮುದ್ದೆಯಾಗುತಿದ್ದಿತು. ಇಂತಹ ಆಹಾರವನ್ನು ಗುಣಗುಟ್ಟದೆ, ನಗುಮೊಗದಿಂದ ನುಂಗುವ ಬಹಳ ಜನರನ್ನು ನಾನು ಕಂಡಿಲ್ಲ. ಮಾತ್ರವಲ್ಲ, ವಿದ್ಯಾವಂತರೆನಿಸಿಕೊಳ್ಳುವ ಜನರೂ ಅಡಿಗೆ ಬೇಯುವುದರಲ್ಲಿ ಹೆಚ್ಚುಕಡಿಮೆಯಾದರೆ, ಅಳತೆಗಿಂತ ಕಡಿಮೆ ಬಡಿಸಿದರೆ, ಬಡಿಸಲು ಸ್ವಲ್ಪ ಮಟ್ಟಿಗೆ ತಡವಾದರೂ ಕೂಡ ರೇಗುವುದನ್ನು ದಕ್ಷಿಣ ಆಫ್ರಿಕೆಯ ಸೆರೆಮನೆಗಳಲ್ಲಿ ನೋಡಿದ್ದೇನೆ.

ಅಡಿಗೆ ಮಾಡುವುದಕ್ಕಿಂತ ಬಡಿಸುವುದು ಇನ್ನೂ ಕಷ್ಟ. ಆ ಆಡಳಿತವೂ ನನ್ನದೇ. ಅಡಿಗೆ ಕೆಟ್ಟಿರಲಿ, ರುಚಿಯಾಗಿರಲಿ, ಅದೆಲ್ಲಕ್ಕೂ ನಾನೇ ಹೊಣೆಯಾಗುತಿದ್ದೆ. ಒಮ್ಮೊಮ್ಮೆ ಅಡಿಗೆ ತೀರ ಕಡಿಮೆಯಾಗಿದ್ದು ನಿರೀಕ್ಷೆಗಿಂತ ಹೆಚ್ಚು ಜನರು ಬರುತಿದ್ದರು. ಆಗ ಸ್ವಲ್ಪ ಸ್ವಲ್ಪವನ್ನೇ ಬಡಿಸಿ ಅವರನ್ನು ತೃಪ್ತಿಪಡಿಸುವ ಕೆಲಸವನ್ನೂ ನಾನು ಮಾಡಬೇಕಾಗುತಿತ್ತು. ತೀರ ಕಡಿಮೆ ಬಡಿಸಿದಾಗ ಆ ಅಕ್ಕತಂಗಿಯರು ಕ್ಷಣಮಾತ್ರ ಕೆಂಗಣ್ಣಿನಿಂದ ನನ್ನನ್ನೇ ನೋಡಿದ ನೋಟ ಎಂದಿಗೂ ಮರೆಯುವಂತಿಲ್ಲ. ಆದರೆ ನಾನೇ ಆಯ್ದುಕೊಂಡ, ಯಾರೂ ಉಪಕಾರ ಸ್ಮರಿಸದ ಈ ಕೆಲಸದ ಅರಿವು ಬಂದೊಡನೆ ಆ ಸಿಟ್ಟು ಮುಗುಳುನಗೆಯಾಗಿ ಜಾರುತಿದ್ದಿತು. 'ನಾನೇನುಮಾಡಲಿ?

ಮಾಡಿದ ಅಡಿಗೆ ಸ್ವಲ್ಪ. ಊಟಕ್ಕೆ ಬರುವ ಜನ ಬಹಳ. ಆದ್ದರಿಂದ ಎಲ್ಲರಿಗೂ ಸಮನಾಗಿ ಹಂಚುವುದು ಬೇಡವೇ?' ಎಂದು ನಾನು ಹೇಳುತಿದ್ದೆ. ಇಷ್ಟರಿಂದ ಪರಿಸ್ಥಿತಿಯನ್ನು ತಿಳಿದುಕೊಂಡು ತೃಪ್ತರಾಗಿ ನಗೆಮೊಗದಿಂದ ಹೋಗುತಿದ್ದರು.

## ೩೭. ಮಹಾಯಾತ್ರೆ— ೧

ಈಗ ಚಾರ್ಲ್ಸ್‌ಟೌನ್ ಬಿಡುವ ಹೊತ್ತು ಬಂದಿತು. ಆಗ ನಾನು ಸರಕಾರಕ್ಕೆ ಹೀಗೆ ಬರೆದೆ:—'ಈಗ ನಾವು ಟ್ರಾನ್ಸ್‌ವಾಲ್ ಪ್ರವೇಶಿಸುವುದು ಅಲ್ಲಿ ಸ್ಥಿರವಾಗಿ ನೆಲೆಗೊಳ್ಳುವ ಉದ್ದೇಶದಿಂದಲ್ಲ. ಆದರೆ ಮಂತ್ರಿಗಳ ವಚನ-ಭಂಗವನ್ನು ಪರಿಣಾಮಕಾರಿಯಾಗಿ ನಿಷೇಧಿಸುವುದಕ್ಕೆ; ಮತ್ತು ಈ ವಚನ-ಭಂಗದಿಂದ ನಮ್ಮ ಆತ್ಮಗೌರವಕ್ಕೆ ಆದ ಹಾನಿಯನ್ನು ಪರಿತಾಪಪೂರ್ವಕವಾಗಿ ನಿಷೇಧಿಸಲಿಕ್ಕೆ ಮಾತ್ರ. ಸರಕಾರ ಬೇಕಾದರೆ ಈಗ ನಾವು ಇರುವಲ್ಲಿಯೇ —ಚಾರ್ಲ್ಸ್‌ಟೌನಿನಲ್ಲಿ—ನಮ್ಮನ್ನು ಸೆರೆಹಿಡಿದು ನಮ್ಮ ಕಳವಳವನ್ನು ಶಾಂತಪಡಿಸಬಹುದು. ನೀವು ಹಾಗೆ ಮಾಡದಿದ್ದರೆ, ಮತ್ತು ನಮ್ಮೊಳಗಿನ ಯಾರಾದರೂ ಮುಚ್ಚುಮರೆಯಿಂದ ಟ್ರಾನ್ಸ್‌ವಾಲ್ ಪ್ರವೇಶಿಸಿದರೆ ನಾವು ಹೊಣೆಯಲ್ಲ. ಈ ಚಳುವಳಿಯಲ್ಲಿ ಗುಟ್ಟೆಂಬುದಿಲ್ಲ. ಯಾರ ಮೇಲೂ ನಮಗೆ ಹಗೆತನವಿಲ್ಲ. ನಮ್ಮೊಳಗಿನ ಯಾರೂ ಮುಚ್ಚುಮರೆಯಿಂದ ಟ್ರಾನ್ಸ್‌ವಾಲ್ ಪ್ರವೇಶಿಸುವುದು ನಮಗೆ ಸೇರುವುದಿಲ್ಲ. ಆದರೆ ಅಂತಹ ಯಾವ ಕೃತಿಗೂ ನಾವು ಹೊಣೆಯಾಗಲಾರೆವು. ಏಕೆಂದರೆ ಅಪರಿಚಿತರಾದ ಸಾವಿರಾರು ಜನರನ್ನು ನಾವು ಅಂಕೆಯಲ್ಲಿಡಬೇಕಾಗಿದೆ. ಇದಲ್ಲದೆ ಪ್ರೇಮಬಲವೇ ಅವರ ಮೇಲೆ ನಮಗಿರುವ ಅಧಿಕಾರ. ಮೂರು ಪೌಂಡು ತಲೆಗಂದಾಯ ತೆಗೆದುಹಾಕಿದರೆ ಸಂಪೂ ಕೂಡಲೇ ನಿಂತುಬಿಡುವುದು; ಮುಷ್ಕರದಲ್ಲಿ ಸೇರಿದ ಕೂಲಿಕಾರರು ಕೆಲಸಕ್ಕೂ ಹಿಂದಿರುಗುವರು. ನಮ್ಮ ಉಳಿದ ಸಂಕಷ್ಟನಿವಾರಣೆಯ ಹೋರಾಟದಲ್ಲಿ ಸೇರಲು ಅವರನ್ನು ಬೆಸಗೊಳ್ಳುವುದಿಲ್ಲ.'

ಹೀಗೆ ಪರಿಸ್ಥಿತಿ ಸಂಪೂರ್ಣ ಅನಿಶ್ಚಿತವಿತ್ತು. ಸರಕಾರ ನಮ್ಮನ್ನು ಯಾವಾಗ ಸೆರೆ ಹಿಡಿಯುವುದೋ ಗೊತ್ತಿರಲಿಲ್ಲ. ಆದರೆ ಇಂತಹ ಸಂದು—

ಕಟ್ಟಿನ ಸಮಯದಲ್ಲಿ ಸರಕಾರದ ಉತ್ತರಕ್ಕಾಗಿ ಬಹಳ ಕಾಲ ಕಾಯುವುದು ಸಾಧ್ಯವಿರಲಿಲ್ಲ. ಆದ್ದರಿಂದ ನಮ್ಮ ಬಂಧನವಾಗದಿದ್ದರೆ ಇಂತಹ ಒಂದು ದಿನದೊಳಗೆ ಟ್ರಾನ್ಸ್‌ವಾಲ್ ಪ್ರವೇಶಿಸುವುದೆಂದು ನಿರ್ಧರಿಸಿದೆವು. ದಾರಿಯಲ್ಲಿ ಸೆರೆಯಾಗದಿದ್ದರೆ ನಮ್ಮ ಈ 'ಶಾಂತಿಸೈನ್ಯ' ದಿನಕ್ಕೆ ೨೦–೨೫ ಮೈಲಿನಂತೆ ಎಂಟು ದಿನಗಳ ವರೆಗೆ ನಡೆದು ಟಾಲ್‌ಸ್ಟಾಯ್ ಆಶ್ರಮ ಸೇರತಕ್ಕದ್ದೆಂದೂ, ಸತ್ಯಾಗ್ರಹ ಹೋರಾಟ ಕೊನೆಗೊಳ್ಳುವ ವರೆಗೆ ಅಲ್ಲಿರುವುದೆಂದೂ ಹೊಟ್ಟೆಯ ಪಾಡಿಗಾಗಿ ಆಶ್ರಮದಲ್ಲಿ ದುಡಿಯಬೇಕೆಂದೂ ನಿಶ್ಚಯವಾಗಿತ್ತು. ಇದಕ್ಕೆ ಅಗತ್ಯವಿದ್ದ ಎಲ್ಲ ಸಿದ್ಧತೆಯನ್ನು ಶ್ರೀ. ಕಾಲೆನ್‌ಬಾಕರು ಮಾಡಿದ್ದರು. ಈ ಯಾತ್ರಿಕರ ನೆರವಿನಿಂದ ಮಣ್ಣುಗುಡಿಸಲುಗಳನ್ನು ಕಟ್ಟುವುದು ನಮ್ಮ ಯೋಚನೆ. ಈ ಗುಡಿಸಲು ಕಟ್ಟುವ ಕೆಲಸ ಮುಗಿಯುವ ವರೆಗೆ ಮುದುಕರೂ ಅಶಕ್ತರೂ ಗುಡಾರಗಳಲ್ಲಿರಬೇಕು. ಶಕ್ತರು ಬೈಲಿನಲ್ಲಿರಬೇಕು. ಮಳೆಗಾಲ ಸಮೀಪಿಸುತ್ತಿರುವುದೇ ನಮಗೊಂದು ದೊಡ್ಡ ಯೋಚನೆ. ಮೈಮೇಲೆ ಮಳೆ ಬೀಳದಂತೆ ಪ್ರತಿ ಒಬ್ಬರಿಗೂ ಮರೆ ಬೇಕಷ್ಟೆ? ಕಾಲೆನ್‌ಬಾಕರು ಈ ತೊಂದರೆಯನ್ನು ಹೇಗಾದರೂ ನಿವಾರಿಸಬಹುದೆಂದು ಧೈರ್ಯವಾಗಿದ್ದರು.

ಪ್ರಯಾಣದ ಇತರ ಸಿದ್ಧತೆಗಳನ್ನು ನಾವು ಮಾಡಿದೆವು. ಚಾರ್ಲ್ಸ್‌ಟೌನ್ ಆರೋಗ್ಯಾಧಿಕಾರಿಗಳಾದ ಡಾ. ಬ್ರಿಸ್ಕೊ ಅವರು ಏನೂ ಯೋಚನೆ ಮಾಡದೆ ಒಂದು ಚಿಕ್ಕ ಔಷಧದ ಪೆಟ್ಟಿಗೆ ಕೊಟ್ಟರು. ಇದಲ್ಲದೆ ನನ್ನಂತಹ ತಜ್ಞನಲ್ಲದ ಮನುಷ್ಯನೂ ಉಪಯೋಗಿಸಬಹುದಾದ ಕೆಲವು ಶಸ್ತ್ರೋಪಕರಣಗಳನ್ನು ಕೊಟ್ಟರು. ಸಜ್ಜನರಾದ ಇವರಿಗೆ ನಮ್ಮ ವಿಷಯದಲ್ಲಿ ಆರಂಭದಿಂದಲೂ ಸಹಾನುಭೂತಿ ಇತ್ತು. ನಮ್ಮ ಜೊತೆಯಲ್ಲಿ ಯಾವ ವಾಹನವೂ ಇಲ್ಲದ್ದರಿಂದ ಆ ಪೆಟ್ಟಿಗೆಯನ್ನು ಪ್ರಯಾಣಿಕರೇ ಹೊರಬೇಕಾಗುತಿದ್ದಿತು. ಅದಕ್ಕಾಗಿ ಜೊತೆಯಲ್ಲಿ ಸ್ವಲ್ಪ ಔಷಧವನ್ನೇ ತೆಗೆದುಕೊಂಡೆವು. ಇದು ಒಮ್ಮೆಲೇ ನೂರು ಜನರಿಗೂ ಸಾಕಾಗುತ್ತಿರಲಿಲ್ಲ. ದಿನವೂ ಮುಂದಿನ ಯಾವುದೊಂದು ಹಳ್ಳಿಗೆ ಹೋಗುತಿದ್ದುದರಿಂದ ಕಡಿಮೆಬಿದ್ದ ಔಷಧ ಅಲ್ಲಿಯೆ ಸಿಕ್ಕುವ ಸಂಭವವಿತ್ತು. ಮತ್ತು ಬೇನಿಗರನ್ನೂ ಅಶಕ್ತರನ್ನೂ ಜೊತೆಗೆ ಕರೆದೊಯ್ಯುತ್ತಿರಲಿಲ್ಲ. ಅಕ್ಕಪಕ್ಕದ ಹಳ್ಳಿಗಳಲ್ಲಿ ಅವರಿಗೆ ತಕ್ಕ ಏರ್ಪಾಡು ಮಾಡಿದ್ದೆವು.

ನಾವು ಕೊಡುವ ಪಡಿಯೆಂದರೆ ರೊಟ್ಟಿ ಮತ್ತು ಸಕ್ಕರೆ. ಆದರೆ ಈ ಎಂಟು ದಿನದ ಪ್ರಯಾಣಕ್ಕೆ ರೊಟ್ಟಿ ಎಲ್ಲಿಂದ ತರುವುದು? ಅದು ದಿನ ದಿನವೂ ಕೊಡಬೇಕಾದ ಪದಾರ್ಥ. ಬೇಕಾದ ಅಷ್ಟನ್ನೂ ಒಂದೇ ಸಲ ಸಂಗ್ರಹಿಸಿದರೆ ಕೆಡುವ ವಸ್ತು. ಇದಕ್ಕೆ ಇರುವ ಒಂದೇ ಹಾದಿಯೆಂದರೆ ಯಾರಾದರೂ ಪ್ರತಿದಿನವೂ ಒದಗಿಸುವುದು. ಆದರೆ ಯಾರು ಒದಗಿಸಬೇಕು? ಹಿಂದೀ ರೊಟ್ಟಿಗಾರರಂತೂ ಇಲ್ಲವೇ ಇಲ್ಲ. ಇದಲ್ಲದೆ ಹಳ್ಳಿಹಳ್ಳಿಗಳಲ್ಲಿ ರೊಟ್ಟಿಗಾರರೆಲ್ಲಿ ಸಿಗಬೇಕು? ಈ ವಿಷಯದಲ್ಲಿ ಹಳ್ಳಿಗಳಿಗೆ ಪಟ್ಟಣವೇ ಆಧಾರ. ಆದ್ದರಿಂದ ಇದನ್ನು ಯಾವನೊಬ್ಬ ರೊಟ್ಟಿಗಾರ ಪಟ್ಟಣದಿಂದ ಉಗೆಬಂಡಿಯ ಮೂಲಕ ಗೊತ್ತಾದ ಸ್ಥಳಕ್ಕೆ ಕಳಿಸಬೇಕು. ವಾಕ್ಸ್‌ರಸ್ಟ್ ಚಾರ್ಲ್ಸ್‌ಟೌನಿನ ಇಮ್ಮಡಿಯಷ್ಟು ದೊಡ್ಡದು. ಅಲ್ಲಿಯ ಒಬ್ಬ ಐರೋಪ್ಯ ರೊಟ್ಟಿಗಾರ ಬೇಕಾದಲ್ಲಿಗೆ ಬೇಕಾದಷ್ಟು ಪೂರೈಸುವುದಾಗಿ ಸಂತೋಷದಿಂದ ಒಪ್ಪಿಕೊಂಡ. ಇವನು ನಮ್ಮ ಆವಶ್ಯಕತೆಯ ಸಂದರ್ಭ ಸಾಧಿಸಿ ನಮಗೆ ಹೆಚ್ಚಿನ ದರಕ್ಕೆ ಮಾರಬಹುದಾಗಿದ್ದಿತು. ಆದರೆ ಹಾಗೆ ಮಾಡಲಿಲ್ಲ. ಪೇಟೆಯ ದರಕ್ಕಿಂತ ಹೆಚ್ಚಿಗೆ ಏನೂ ತೆಗೆದುಕೊಳ್ಳಲಿಲ್ಲ ಮತ್ತು ಒಳ್ಳೇ ಚೊಕ್ಕ ಹಿಟ್ಟಿನ ರೊಟ್ಟಿಯನ್ನೆ ಮಾಡಿಕೊಟ್ಟ. ರೈಲಿನ ಮೂಲಕ ಇವನು ಈ ಗಂಟನ್ನು ತಪ್ಪದೆ ಕಳುಹಿಸುತಿದ್ದ. ರೈಲ್ವೆ ಅಧಿಕಾರಿಗಳು– ಇವರೂ ಯುರೋಪಿಯನ್ನರೇ–– ಪ್ರಾಮಾಣಿಕತನದಿಂದ ನಮಗೆ ಕೊಡುತಿದ್ದರು. ದಾರಿಯಲ್ಲಿಯೂ ಅಷ್ಟೆ; ರೊಟ್ಟಿಯ ಈ ಗಂಟನ್ನು ಬಹಳ ಜತನದಿಂದ ಕಾಪಾಡುತಿದ್ದರು. ಇದಲ್ಲದೆ ಕೆಲವು ಹೆಚ್ಚಿನ ಸೌಕರ್ಯಗಳನ್ನೂ ಒದಗಿಸಿದರು. ಯಾರ ವಿಷಯದಲ್ಲಿಯೂ ನಮಗೆ ದ್ವೇಷಭಾವನೆ ಇಲ್ಲ; ಯಾವ ಪ್ರಾಣಿಗೂ ಕೆಡುಕು ಬಗೆಯುವುದಿಲ್ಲ; ಆತ್ಮತ್ಯಾಗವೇ ನಾವು ಪರಿಹಾರ ಪಡೆಯುವ ಹಾದಿ; ಎಂಬುದು ಅವರಿಗೆ ಮನವರಿಕೆಯಾಗಿತ್ತು. ಹೀಗೆ ನಮ್ಮ ಸುತ್ತುಮುತ್ತಲಿನ ವಾತಾವರಣವೆಲ್ಲ ಶುದ್ಧವಾಗಿ ಕೊನೆತನಕ ಹಾಗೆಯೆ ಉಳಿಯಿತು. ಪ್ರತಿ ಒಬ್ಬ ಮಾನವನಲ್ಲಿಯೂ ಸುಪ್ತವಾಗಿರುವ ಪ್ರೇಮಭಾವನೆ ಇಲ್ಲಿಯೂ ಹೊರಹೊಮ್ಮಿತು. ಹಿಂದು, ಕಿರಿಸ್ತಾನ್, ಜ್ಯೂ, ಮುಸಲ್ಮಾನ್ ಅಥವಾ ಬೇರೆ ಯಾವ ಪಂಗಡಕ್ಕೇ ಸೇರಿರಲಿ, ನಾವೆಲ್ಲರೂ ಅಣ್ಣತಮ್ಮಂದಿರು ಎಂಬ ಭಾವನೆ ಎಲ್ಲರಲ್ಲಿಯೂ ಉಂಟಾಯಿತು.

ಈ ಮಹಾಯಾತ್ರೆಯ ಎಲ್ಲ ಸಿದ್ಧತೆಗಳು ಮುಗಿದ ಮೇಲೆ ಒಪ್ಪಂದಕ್ಕಾಗಿ ಒಂದು ಕೊನೆಯ ಪ್ರಯತ್ನ ಮಾಡಿದೆ. ಸರಕಾರಕ್ಕೆ ಇಷ್ಟರಲ್ಲಿಯೆ ಎಷ್ಟೋ ಕಾಗದಗಳನ್ನೂ ತಂತಿಗಳನ್ನೂ ಕಳಿಸಿದ್ದೆ. ಈಗ ಜನರಲ್ ಸ್ಮಟ್ಸ್ ಅವರಿಗೆ ಟೆಲಿಫೋನ್ ಮಾಡಿದೆ. ' ಜನರಲ್ ಸ್ಮಟ್ಸ್ ನಿಮ್ಮೊಂದಿಗೆ ಯಾವ ವ್ಯವಹಾರಕ್ಕೂ ಸಿದ್ಧರಿಲ್ಲ. ತಿಳಿದಂತೆ ನಡೆಯಲು ನೀವು ಸ್ವತಂತ್ರರು ' ಎಂದು ಅರ್ಧ ನಿಮಿಷದಲ್ಲಿ ಉತ್ತರ ಬಂದಿತು. ಇಲ್ಲಿಗೆ ಸಂಧಿಯ ಪ್ರಸ್ತಾಪ ಎಲ್ಲವೂ ನಿಂತುಹೋಯಿತು. ಹೀಗಾಗುವುದೆಂದು ಮೊದಲೇ ಗೊತ್ತಿದ್ದರೂ ಈ ಒರಟು ಉತ್ತರವನ್ನು ನಿರೀಕ್ಷಿಸಿರಲಿಲ್ಲ. ಮರುದಿನ—೧೯೧೩ನೆ ನವಂಬರು ೬—ಬೆಳಿಗ್ಗೆ ೬-೩೦ಕ್ಕೆ ಪ್ರಾರ್ಥನೆ ಮುಗಿದ ಮೇಲೆ ದೇವರ ಮೇಲೆ ಭಾರ ಹಾಕಿ ಮಹಾಯಾತ್ರೆ ಆರಂಭಿಸಿದೆವು. ಪ್ರಯಾಣಿಕರ ಈ ಸಾಲಿನಲ್ಲಿ ೨೦೩೭ ಗಂಡಸರು, ೧೨೭ ಹೆಂಗಸರು, ೫೭ ಮಕ್ಕಳು ಇದ್ದರು.

## ೪೮. ಮಹಾಯಾತ್ರೆ — ೨

ಚಾರ್ಲ್ಸ್‌ಟೌನಿನಿಂದ ಒಂದು ಮೈಲು ದೂರ ಒಂದು ಚಿಕ್ಕ ಹೊಲ ಇದೆ. ಅದನ್ನು ದಾಟಿದರೆ ವಾಕ್ಸ್‌ರಸ್ಟಿಗೂ, ಹಾಗೆಯೆ ಟ್ರಾನ್ಸ್‌ವಾಲಿಗೂ ಪ್ರವೇಶಿಸಿದಂತೆ. ಎಲ್ಲೆಯಲ್ಲಿ ಒಂದು ಚಿಕ್ಕ ಸಶಸ್ತ್ರ ಪೋಲೀಸ್ ಪಡೆ ಕಾವಲಿತ್ತು. ಸಂಜ್ಞೆ ಮಾಡಿದೊಡನೆ ಎಲ್ಲೆ ದಾಟಿ ಬರಬೇಕೆಂದು ನಮ್ಮ ಜನರಿಗೆ ತಿಳಿಸಿ ನಾನು ಪೋಲೀಸ್ ಪಡೆಯ ಬಳಿ ಹೋದೆ. ಆದರೆ ನಾನು ಪೋಲೀಸರೊಂದಿಗೆ ಮಾತನಾಡುತ್ತಿರುವಂತೆಯೇ ಈ ಜನರು ನುಗ್ಗಿ ಬಂದು ಗಡಿಯಾಟಿಬಿಟ್ಟರು. ಪೋಲೀಸರು ಅವರನ್ನು ತಡೆಯಲು ಹವಣಿಸಿದರು. ಆದರೆ ನುಗ್ಗಿ ಬರುತ್ತಿರುವ ಈ ಗುಂಪನ್ನು ತಡೆಯುವುದು ಸುಲಭವಾಗಿರಲಿಲ್ಲ. ಈ ಕಾವಲು-ಪೋಲಿಸರಿಗೆ ನಮ್ಮನ್ನು ಸೆರೆಹಿಡಿಯುವ ಉದ್ದೇಶವಿರಲಿಲ್ಲ. ನಾನು ಈ ಜಂಗುಳಿಗೆ ಬುದ್ಧಿ ಹೇಳಿ ಅವರು ಕ್ರಮವಾಗಿ ಸಾಲುಗೊಳ್ಳುವಂತೆ ಮಾಡಿದೆ. ನಾಲ್ಕೆಂಟು ನಿಮಿಷಗಳಲ್ಲಿ ಅವ್ಯವಸ್ಥೆ ಮಾಯವಾಗಿ ಟ್ರಾನ್ಸ್‌ವಾಲ್ ಪ್ರವೇಶ ಆರಂಭವಾಯಿತು.

ಎರಡು ದಿನದ ಹಿಂದೆ ವಾಕ್ಸ್‌ರಸ್ಟಿನ ಐರೋಪ್ಯರು ಸಭೆಸೇರಿ ನಮಗೆ ಎಲ್ಲ ತರದ ಹೆದರಿಕೆ ತೋರಿಸಿದ್ದರು. ಟ್ರಾನ್ಸ್‌ವಾಲಿಗೆ ಬಂದರೆ ನಮ್ಮನ್ನು ಗುಂಡಿಕ್ಕಿ ಕೊಲ್ಲುವುದಾಗಿ ಕೆಲವರು ಹೇಳಿದರು. ಶ್ರೀ. ಕಾಲೆನ್‌ಬಾಕರು ಹಿಂದೀಯರ ಪಕ್ಷಮಂಡನೆಗಾಗಿ ಈ ಸಭೆಗೆ ಹೋಗಿದ್ದರು. ಆದರೆ ಯುರೋಪಿಯನ್ನರು ಅವರ ಮಾತಿಗೆ ಕಿವಿಗೊಡಲು ಸಿದ್ಧರಿರಲಿಲ್ಲ.

ಈ ಸಭೆಯ ವಿವರಗಳು ನಮಗೆ ತಿಳಿದಿದ್ದುದರಿಂದ ವಾಕ್ಸ್‌ರಸ್ಟಿನ ಐರೋಪ್ಯರಿಂದ ಬರುವ ಕೀಟಲೆಗಳನ್ನೆಲ್ಲ ಸಹಿಸಲು ಸಿದ್ಧರಾಗಿದ್ದೆವು. ವಾಕ್ಸ್‌ರಸ್ಟಿನ ಯುರೋಪಿಯನ್ನರಿಂದ ನಮಗೆ ಯಾವ ಹಿಂಸೆಯೂ ಆಗದಿರಲೆಂದು ಎಲ್ಲೆಯಲ್ಲಿ ಅಷ್ಟು ಜನ ಪೋಲಿಸರನ್ನು ಇಟ್ಟಿದ್ದರೂ ಇಟ್ಟಿರಬಹುದು. ಅದು ಹೇಗೂ ಇರಲಿ, ನಮ್ಮ ಮೆರವಣಿಗೆ ಶಾಂತರೀತಿಯಿಂದ ವಾಕ್ಸ್‌ರಸ್ಟ್ ದಾಟಿಹೋಯಿತು. ಒಬ್ಬ ಐರೋಪ್ಯನಾದರೂ ಬರಿಯ ಹುಡುಗಾಟಿಕೆ ಮಾಡಿದ್ದೂ ನನಗೆ ನೆನಪಿಲ್ಲ. ಈ ಹೊಸ ನೋಟ ನೋಡಲು ಎಲ್ಲರೂ ಹೊರಗೆ ನಿಂತಿದ್ದರು. ಕೆಲವರ ಕಣ್ಣಿನಲ್ಲಿ ಸ್ನೇಹದ ಹೊಳಪೂ ಕಾಣುತಿತ್ತು.

ಮೊದಲ ರಾತ್ರಿ ನಾವು ಪಾಮ್‌ಫರ್ಡಿನಲ್ಲಿ—ವಾಕ್ಸ್‌ರಸ್ಟಿನಿಂದ ಎಂಟು ಮೈಲು ದೂರ—ತಂಗುವುದು ಗೊತ್ತಾಗಿತ್ತು. ಸಂಜೆ ಸುಮಾರು ಐದು ಗಂಟೆಗೆ ಅಲ್ಲಿಗೆ ಸೇರಿದೆವು. ಜನರೆಲ್ಲ ರೊಟ್ಟಿ ಸಕ್ಕರೆ ತಿಂದು ಬೈಲಿನಲ್ಲೇ ಹಾಸಿಗೆ ಬಿಚ್ಚಿದರು. ಕೆಲವರು ತಮ್ಮತಮ್ಮಲ್ಲಿ ಮಾತಾಡುತಿದ್ದರು; ಕೆಲವರು ಭಜನೆ ಮಾಡುತಿದ್ದರು. ಈ ಪ್ರಯಾಣದಿಂದ ಕೆಲವು ಹೆಂಗುಸರು ಬಹಳ ದಣಿದಿದ್ದರು. ಹೊರಡುವಾಗ ಅವರೇನೋ ಧೈರ್ಯದಿಂದಲೇ ಮಕ್ಕಳನ್ನು ಎತ್ತಿಕೊಂಡು ಬಂದಿದ್ದರು. ಆದರೆ ಈ ಸಾಹಸ ಮುಂದೆ ಸಾಧ್ಯವಿರಲಿಲ್ಲ. ಆದ್ದರಿಂದ ನಾನು ಮೊದಲಿಗೇ ಸೂಚಿಸಿದಂತೆ ಅವರಿಗೆ ಒಬ್ಬ ಹಿಂದೀ ಸದ್ಗೃಹಸ್ಥನಲ್ಲಿ ಬಿಡದಿ ಗೊತ್ತುಮಾಡಿದೆ. ನಾವು ನಿರ್ವಿಘ್ನವಾಗಿ ಟಾಲ್‌ಸ್ಟಾಯ್ ಆಶ್ರಮ ಸೇರಿದರೆ ಅವರನ್ನು ಅಲ್ಲಿಗೆ ಕಳಿಸುವುದಾಗಿಯೂ ನಮ್ಮ ಸೆರೆಯಾದರೆ ತಮ್ಮ ತಮ್ಮ ಮನೆಗಳಿಗೆ ಕಳಿಸುವುದಾಗಿಯೂ ಅವನು ಮಾತುಕೊಟ್ಟಿದ್ದ.

ರಾತ್ರಿ ಕ್ರಮೇಣ ಎಲ್ಲ ಸದ್ದೂ ನಿಂತಿತು. ನಾನು ಮಲಗುವ ಸಿದ್ಧತೆಯಲ್ಲಿದ್ದೆ. ಅಷ್ಟರಲ್ಲಿ ಹೊರಗೆ ಕಾಲಿನ ಸದ್ದು ಕೇಳಿಸಿತು. ಕೈಯಲ್ಲಿ ದೀಪ

ಹಿಡಿದುಕೊಂಡು ಒಬ್ಬ ಯುರೋಪಿಯನ್ ಅಧಿಕಾರಿ ಬರುತಿದ್ದ. ನನಗೆ ಕೂಡಲೇ ಅದರ ಅರ್ಥವಾಯಿತು. ಆದರೆ ಮಾಡಬೇಕಾದ ಸಿದ್ಧತೆ ಏನೂ ಇರಲಿಲ್ಲ ಆ ಪೋಲೀಸ್ ಅಧಿಕಾರಿ ಬಂದು 'ನಿನ್ನನ್ನು ಕೈಸೆರೆ ಮಾಡಲು ಆಜ್ಞೆಯಾಗಿದೆ' ಎಂದ

"ಯಾವಾಗ?"—ನಾನು ಕೇಳಿದೆ.

"ಈಗಲೇ."

"ನನ್ನನ್ನು ಎಲ್ಲಿಗೆ ಕರೆದೊಯ್ಯುತ್ತೀರಿ?"

"ಈಗ ಹತ್ತಿರದ ಸ್ಟೇಶನ್ನಿಗೆ ಹೋಗಿ ಮೊದಲ ಬಂಡಿಯಿಂದ ವಾಕ್ಸ್‌ರಸ್ಟಿಗೆ."

"ಯಾರಿಗೂ ತಿಳಿಸದೆ ನಿಮ್ಮ ಜೊತೆಗೆ ಬರುತ್ತೇನೆ. ಆದರೆ ನನ್ನ ಒಬ್ಬ ಸಹೋದ್ಯೋಗಿಯೊಡನೆ ಸ್ವಲ್ಪ ಮಾತನಾಡುವುದಿದೆ."

"ಹಾಗೆಯೆ ಆಗಲಿ."

ನನ್ನ ಹತ್ತಿರವೇ ಮಲಗಿದ್ದ ಪಿ. ಕೆ. ನಾಯ್ಡು ಅವರನ್ನು ಎಬ್ಬಿಸಿದೆ. ಅವರಿಗೆ ಎಲ್ಲವನ್ನೂ ತಿಳಿಸಿ ರಾತ್ರಿ ಯಾರನ್ನೂ ಎಚ್ಚರಿಸಬಾರದೆಂದು ಹೇಳಿದೆ. 'ನಸುಕಿನಲ್ಲಿ ಸರಿಯಾಗಿ ಪಯಣ ಮುಂದುವರಿಸಬೇಕು. ಮಧ್ಯಾಹ್ನ ಊಟದ ಹೊತ್ತಿಗೆ ನನ್ನ ಬಂಧನದ ಸುದ್ದಿ ತಿಳಿಸಬೇಕು. ನನ್ನ ವಿಷಯವಾಗಿ ನಡುವೆ ಯಾರಾದರೂ ಕೇಳಿದರೆ ಅವರಿಗೆ ಮಾತ್ರ ಹೇಳಬಹುದು. ತಮ್ಮನ್ನು ಸೆರೆಹಿಡಿಯಲು ಬಂದರೆ ಯಾರೂ ಅಡ್ಡಿ ಮಾಡಕೂಡದು. ಸೆರೆಯಾಗದಿದ್ದರೆ ಕಾರ್ಯಕ್ರಮದಂತೆ ಪ್ರಯಾಣ ಸಾಗಬೇಕು.' ನೈಡೂಗೆ ಹೆದರಿಕೆ ಏನೂ ಇರಲಿಲ್ಲ. ತಮ್ಮ ಬಂಧನವಾದರೆ ಹೇಗೆ ನಡೆಯಬೇಕೆಂಬುದನ್ನೂ ಇವರಿಗೆ ಹೇಳಿದೆ. ಕಾಲೆನ್‌ಬಾಕರು ಆಗ ವಾಕ್ಸ್‌ರಸ್ಟಿನಲ್ಲಿದ್ದರು.

ಪೋಲೀಸ್ ಅಧಿಕಾರಿಯೊಂದಿಗೆ ನಾನು ಹೊರಟೆ ಮರುದಿನ ಬೆಳಿಗ್ಗೆ ಉಗಿಬಂಡಿಯ ಮೂಲಕ ವಾಕ್ಸ್‌ರಸ್ಟಿಗೆ ಹೋದೆವು. ವಾಕ್ಸ್‌ರಸ್ಟ್ ನ್ಯಾಯಾಸ್ಥಾನದಲ್ಲಿ ನಾನು ಹಾಜರಾದೆ. ಆದರೆ ಸರಕಾರದ ವಕೀಲರು ಸಾಕ್ಷಿಪಟ್ಟಿಯೊಂದಿಗೆ ವ್ಯವಹರಣೆಗೆ ಸಿದ್ಧರಾಗಿರಲಿಲ್ಲ. ಆದ್ದರಿಂದ ೧೪ನೆ ತಾರೀಕುವರೆಗೆ ಗಡುವು ತೆಗೆದುಕೊಂಡರು. ವ್ಯವಹರಣೆ ಅದರಂತೆ ಮುಂದುವರಿಯಿತು. ನನ್ನ ಸ್ವಾಧೀನದಲ್ಲಿ ೨೦೦೦ ಗಂಡುಸರು, ೧೨೨ ಹೆಂಗುಸರು, ಮತ್ತು ೫೦

ಮಕ್ಕಳು ಇದ್ದರು. ನನ್ನ ವಿಚಾರಣೆ ಆರಂಭವಾಗುವುದರೊಳಗೆ ನಾನು ಅವರೆಲ್ಲರನ್ನೂ ಗೊತ್ತಾದ ಸ್ಥಳಕ್ಕೆ ಸೇರಿಸಬೇಕಾಗಿದ್ದಿತು ಆದ್ದರಿಂದ ಹೊಣೆಯ ಮೇಲೆ—ಜಾಮೀನಿನಿಂದ— ನನ್ನ ಬಿಡುಗಡೆ ಮಾಡಬೇಕೆಂದು ಕೇಳಿಕೊಂಡೆ. ಸರಕಾರದ ವಕೀಲರು ನನ್ನ ಅರ್ಜಿಯನ್ನು ಬಲವಾಗಿ ವಿರೋಧಿಸಿದರು. ಆದರೆ ನ್ಯಾಯಾಧೀಶರಿಗೆ ಬೇರೆ ಉಪಾಯವಿರಲಿಲ್ಲ. ಏಕೆಂದರೆ ಕ್ರೂರ ಆಪಾದನೆಗಳಿಗೆ ಒಳಗಾಗದ ಸೆರೆಯಾಳು ತಕ್ಕ ಹೊಣೆಕೊಟ್ಟು ಬಿಡುಗಡೆಯಾಗಬಹುದೆಂಬುದು ಕಟ್ಟಳೆಯ ಆಧಾರ. ನನ್ನ ಈ ಹಕ್ಕು ಕಸಿದುಕೊಳ್ಳುವುದು ಸಾಧ್ಯವಿರಲಿಲ್ಲ. ಆದ್ದರಿಂದ ೫೦ ಪೌಂಡು ಹೊಣೆಯ ಮೇಲೆ ನನ್ನ ಬಿಡುಗಡೆಯಾಯಿತು. ಶ್ರೀ. ಕಾಲೆನ್‌ಬಾಕರು ನನಗಾಗಿಯೆ ಸಿದ್ಧಪಡಿಸಿದ್ದ ಕಾರಿನಲ್ಲಿ ನನ್ನನ್ನು ಕರೆದುಕೊಂಡು ಹೋಗಿ ನಮ್ಮ ಶಾಂತಿ ಸೈನ್ಯವನ್ನು ಸೇರುವಂತೆ ಮಾಡಿದರು.

ನಮ್ಮ ಈ ಯಾತ್ರೆ ಮುಂದೆ ಸಾಗುತ್ತಲಿತ್ತು. ಆದರೆ ನನ್ನನ್ನು ಸ್ವತಂತ್ರವಾಗಿ ಬಿಡುವುದು ಸರಕಾರಕ್ಕೆ ಒಗ್ಗಲಿಲ್ಲ. ಆದ್ದರಿಂದ ೮ನೆ ತಾರೀಕಿನ ದಿನ ಸ್ಟ್ಯಾಂಡರ್ಟನ್ನಿನಲ್ಲಿ ತಿರುಗಿ ಸೆರೆಯಾಯಿತು. ಸ್ಟ್ಯಾಂಡರ್ಟನ್ನು ಸ್ವಲ್ಪ ದೊಡ್ಡ ಊರು. ಅಲ್ಲಿ ನನ್ನ ಸೆರೆಗೆಯ್ದ ರೀತಿ ಸ್ವಲ್ಪ ವಿಚಿತ್ರವಾದುದು. ನಮ್ಮ ದಂಡಿಗೆ ನಾನು ರೊಟ್ಟಿ ಹಂಚುತ್ತಲಿದ್ದೆ. ಅಲ್ಲಿಯ ಹಿಂದೀ ವ್ಯಾಪಾರಿಗಳು ನಮಗೆ ಸ್ವಲ್ಪ ಕಿತ್ತಳೆ ಪಾಕ ಕೊಟ್ಟಿದ್ದರು. ಜೊತೆಯಲ್ಲಿ ಅದೂ ಇದ್ದುದರಿಂದ ಹಂಚುವುದು ಸ್ವಲ್ಪ ತಡವಾಯಿತು. ಅಷ್ಟರಲ್ಲಿ ನ್ಯಾಯಾಧೀಶರು ಬಂದು ನನ್ನ ಪಕ್ಕದಲ್ಲಿ ನಿಂತರು. ಅವರು ಪಡಿಹಂಚುವ ಈ ಕೆಲಸವೆಲ್ಲ ಮುಗಿಯುವ ವರೆಗೆ ತಡೆದು ಆಮೇಲೆ ನನ್ನನ್ನು ಒಂದು ಪಕ್ಕಕ್ಕೆ ಕರೆದರು. ನನಗೆ ಇವರ ಪರಿಚಯವಿತ್ತು. ಬಹುಶಃ ಇವರಿಗೆ ನನ್ನೊಂದಿಗೆ ಏನೋ ಮಾತನಾಡಬೇಕಾಗಿದೆ ಎಂದು ನಾನು ತಿಳಿದೆ. ಅವರು ನಗುತ್ತ 'ನೀವು ನನ್ನ ಸೆರೆಯಾಳು' ಎಂದರು.

"ಹಾಗಾದರೆ ಈಗ ನನಗೆ ಬಡತಿಯಾದಂತಿದೆ. ಏಕೆಂದರೆ ನನ್ನ ಸೆರೆಗೆ ಪೋಲೀಸ್ ಅಧಿಕಾರಿಗಳ ಬದಲು ನ್ಯಾಯಾಧೀಶರೇ ಬರುತಿದ್ದಾರೆ. ನನ್ನ ವಿಚಾರಣೆ ಈಗಲೇ ಆಗುವ ಹಾಗಿದೆ, ಅಲ್ಲವೆ?" ಎಂದೆ ನಾನು.

ಅವರು "ಹೌದು. ನನ್ನ ಜೊತೆಗೆ ನಡೆಯಿರಿ. ಕೋರ್ಟಿನ ನಡೆಯುತ್ತಿದೆ" ಎಂದರು.

ನಾನು ಜನರಿಗೆ ಈ ದಂಡಯಾತ್ರೆ ಹಾಗೆಯೇ ನಡೆಸಲು ಬಿನ್ನವಿಸಿ ನ್ಯಾಯಾಧೀಶರ ಜೊತೆಗೆ ಹೋದೆ. ನ್ಯಾಯಾಸ್ಥಾನ ಸೇರುತ್ತಲೆ ನನ್ನ ಕೆಲವು ಸಂಗಡಿಗ— ಕೆಲಸಗಾರರೂ ಸೆರೆಯಾದುದನ್ನು ಕಂಡೆ.

ನನ್ನನ್ನು ಕೂಡಲೇ ನ್ಯಾಯಾಸ್ಥಾನದೆದುರು ತಂದು ನಿಲ್ಲಿಸಿದರು. ಹೊಣೆಯ ಮೇಲೆ ನನ್ನನ್ನು ಬಿಡಬೇಕೆಂದು ಪ್ರಾರ್ಥಿಸಿದಂತೆ ಇಲ್ಲಿಯೂ ನ್ಯಾಯಾಸ್ಥಾನಕ್ಕೆ ಕೇಳಿಕೊಂಡೆ. ಆದರೆ ಇದನ್ನು ಸರಕಾರದ ವಕೀಲರು ಇಲ್ಲಿಯೂ ಹಾಗೆಯೇ ವಿರೋಧಿಸಿದರು. ಮತ್ತು ನ್ಯಾಯಾಧೀಶರು ೫೦ ಪೌಂಡಿನ ಸ್ವಂತ ಹೊಣೆಯ ಮೇಲೆ ವಾಕ್ಸ್‌ರಸ್ಟಿನಂತೆಯೆ ಬಿಡುಗಡೆ ಮಾಡಿದರು. ವ್ಯವಹರಣೆ [illegible] ತಾರೀಕಿಗೆ ಮುಂದೂಡಲಾಯಿತು. ಹಿಂದೀ ಬಣಜಿಗರು ಒಂದು ಮೋಟಾರ್‌ಬಂಡಿ ಸಿದ್ಧಪಡಿಸಿದ್ದರು. ಅದರಲ್ಲಿ ಕುಳಿತು, ನಮ್ಮ ಯಾತ್ರಿಕರು ಮೂರು ಮೈಲು ದೂರ ಹೋಗುವುದರೊಳಗೇ ಅವರನ್ನು ಕೂಡಿಕೊಂಡೆ. ಇನ್ನು ನಿರ್ವಿಘ್ನವಾಗಿ ಟಾಲ್‌ಸ್ಟಾಯ್ ಆಶ್ರಮ ಸೇರಬಹುದೆಂದು ನಮ್ಮ ಯಾತ್ರಿಕರು ತಿಳಿದುಕೊಂಡಿದ್ದರು; ನಾನೂ ಹಾಗೆಯೆ ತಿಳಿದುಕೊಂಡಿದ್ದೆ. ಆದರೆ ಹಾಗೆ ಆಗುವುದಿರಲಿಲ್ಲ. ನಮ್ಮ ಜನ-ಜಂಗುಳಿ, ಮೇಲಿಂದ ಮೇಲೆ ನಾನು ಸೆರೆಯಾಗುತ್ತಿರುವುದನ್ನು ತಾಳಿಕೊಂಡದ್ದು ಸಣ್ಣ ಮಾತಲ್ಲ. ನನ್ನ ಐವರು ಸಹೋದ್ಯೋಗಿಗಳು ಸೆರೆಯಲ್ಲಿಯೆ ಉಳಿದರು.

ನಾವು ಈಗ ಜೋಹಾನ್ಸಬರ್ಗಿನ ಹತ್ತಿರ ಬಂದಿದ್ದೆವು. ನಮ್ಮ ಇಡಿಯ ಪಯಣ ಎಂಟು ವಿಭಾಗವಾಗಿ ಮಾಡಿದ್ದು ಓದುಗರಿಗೆ ನೆನಪಿರಬಹುದು. ಹೀಗೆ ಕಾರ್ಯಕ್ರಮದಂತೆ ನಮ್ಮ ನಡಿಗೆ ಸಾಗಿತ್ತು. ಇನ್ನೂ ಉಳಿದಿರುವ ನಮ್ಮ ಪ್ರಯಾಣ ನಾಲ್ಕು ದಿನದ್ದು. ಆದರೆ ಇತ್ತ ನಮ್ಮ ಉತ್ಸಾಹ ಹೆಚ್ಚುತ್ತಿದ್ದಂತೆ, ಅತ್ತ ಹಿಂದೀಯರ ದಾಳಿಯನ್ನು ಯಾವ ರೀತಿ ಎದುರಿಸಬೇಕೆಂದು ಸರಕಾರಕ್ಕೂ ದಿನದಿನಕ್ಕೆ ಯೋಚನೆ ಬೆಳೆಯುತ್ತಲಿತ್ತು. ಉದ್ದಿಷ್ಟ ಸ್ಥಳ ಸೇರಿದ ಮೇಲೆ ನಮ್ಮನ್ನು ಬಂಧಿಸಿದರೆ ಸರಕಾರದ ಅಸಮರ್ಥತೆಯನ್ನೂ ದಕ್ಷತೆಯ ಕೊರತೆಯನ್ನೂ ವ್ಯಕ್ತಪಡಿಸಿದಂತಾಗುತಿತ್ತು.

ಆದ್ದರಿಂದ ನಮ್ಮ ಸೆರೆಗೈಯುವುದಾದರೆ ನಾವು ಗುರಿಮುಟ್ಟುವ ಮೊದಲೆ ಗೆಯ್ಯಬೇಕು.

ಈ ಹೊತ್ತಿಗೆ, ಫೀನಿಕ್ಸ್ ಆಶ್ರಮದಲ್ಲಿ ನಮ್ಮೊಡನೆ ಸಮರಸರಾಗಿದ್ದ ಶ್ರೀ. ಹೆನ್ರಿ ಪೋಲಕರು ಹಿಂದುಸ್ತಾನಕ್ಕೆ ಬರಬೇಕೆಂದೂ ಭಾರತ ಮತ್ತು ಸಾಮ್ರಾಜ್ಯ ಸರಕಾರಗಳಿಗೆ ದಕ್ಷಿಣ ಆಫ್ರಿಕೆಯ ಸ್ಥಿತಿಗತಿ ತಿಳಿಸಲು ತಮಗೆ ಸಹಾಯ ಮಾಡಬೇಕೆಂದೂ ಶ್ರೀ. ಗೋಖಲೆಯವರಿಂದ ತಂತಿ ಬಂತು. ಆದ್ದರಿಂದ ಅವರನ್ನು ಹಿಂದುಸ್ತಾನಕ್ಕೆ ಕಳಿಸುವ ಸಿದ್ಧತೆಯಲ್ಲಿ ತೊಡಗಿದೆವು. ಭಾರತಕ್ಕೆ ಹೊರಡಬೇಕೆಂದು ನಾನು ಶ್ರೀ. ಪೋಲಕರಿಗೆ ಬರೆದೆ. ಆದರೆ ನನ್ನನ್ನು ಕಂಡು ಸರಿಯಾದ ಸೂಚನೆ ಪಡೆಯದೆ ಅವರು ಹೊರಡುವಂತಿರಲಿಲ್ಲ. ಆದ್ದರಿಂದ ಈ ಪ್ರಯಾಣದಲ್ಲಿಯೆ ನನ್ನನ್ನು ಕಾಣುವುದಾಗಿ ಅವರು ತಿಳಿಸಿದರು. 'ನೀವು ಬರುತ್ತಿದರಿಂದ ಬಂಧನಕ್ಕೆ ಒಳಗಾಗುವ ಸಂಭವವಿದೆ; ಆದರೂ ಬರಬೇಕೆಂದು ತೋರಿದರೆ ಬರಬಹುದು' ಎಂದು ಅವರಿಗೆ ತಂತಿಯ ಮೂಲಕ ತಿಳಿಸಿದೆ.

ಬಂಧನದ ಅಪಾಯವಿದ್ದರೂ ನನ್ನ ಸಲಹೆಗಾಗಿ ಶ್ರೀ. ಪೋಲಕರು ೯ನೆ ತಾರೀಕಿಗೆ ಟೀಕ್‌ವರ್ತಿಗೆ ಬಂದು ನಮ್ಮನ್ನು ಕೂಡಿಕೊಂಡರು. ಟೀಕ್‌ವರ್ತ್ ಸ್ಟ್ಯಾಂಡರ್ಟನ್ನಿಗೂ ಗ್ರೇಲಿಂಗ್‌ಸ್ಟಾಡಿಗೂ ನಡುವೆ ಇದೆ. ನಾವಿಬ್ಬರೂ ವಿಚಾರವಿನಿಮಯದಲ್ಲಿದ್ದೆವು. ಆಗ ಮಧ್ಯಾಹ್ನ ಮೂರು ಗಂಟೆಯ ಸಮಯ. ಯಾತ್ರಿಕರ ಸಾಲಿನ ತೀರ ಮುಂದುಗಡೆ ನಾನೂ ಪೋಲಕರೂ ಇದ್ದೆವು. ಕೆಲವು ಸಂಗಡಿಗರು ನಮ್ಮ ಮಾತುಕತೆ ಕೇಳುತ್ತಲಿದ್ದರು. ಪೋಲಕರು ಸಂಜೆಯ ಉಗಿಬಂಡಿಯಿಂದ ಡರ್ಬನ್ನಿಗೆ ಹೋಗಬೇಕಾಗಿತ್ತು. ಆದರೆ ದೇವರು ಮನುಷ್ಯನಿಗೆ ತನ್ನ ಹಂಬಲಿಕೆಯಂತೆ ನಡೆಯಲು ಯಾವಾಗಲೂ ಬಿಡುವನೆಂದು ಹೇಳುವುದು ಸಾಧ್ಯವಿಲ್ಲ. ಹೀಗೆ ನಮ್ಮ ಮಾತುಕತೆ ನಡೆದಿರುವಾಗ ಎದುರಿಗೆ ಒಂದು ಬಂಡಿ ಬಂತು. ಅದರೊಳಗಿಂದ ಟ್ರಾನ್ಸ್‌ವಾಲ್ ವಲಸೆಯ ಮುಖ್ಯಾಧಿಕಾರಿ ಶ್ರೀ. ಚಾಮ್ನಿ ಮತ್ತು ಒಬ್ಬ ಪೋಲೀಸಾಧಿಕಾರಿ ಇಳಿದರು. ನನ್ನನ್ನು ಒಂದು ಬದಿಗೆ ಕರೆದು '**ನಿನ್ನನ್ನು** ಸೆರೆ ಹಿಡಿದಿದ್ದೇನೆ' ಎಂದರು ಅವರೊಳಗಿನ ಒಬ್ಬರು.

ಹೀಗೆ ನಾನು ನಾಲ್ಕು ದಿನಗಳಲ್ಲಿ ಮೂರು ಸಲ ಕೈಸೆರೆಯಾದೆ.

"ಈ ಪ್ರಯಾಣಿಕರನ್ನು ಏನು ಮಾಡುತ್ತೀರಿ?"

"ಅದನ್ನು ನಾವು ನೋಡಿಕೊಳ್ಳುತ್ತೇವೆ."

ನಾನು ಸುಮ್ಮನಾದೆ. ಮುಂದಿನ ಹೊಣೆಯನ್ನೆಲ್ಲ ಒಹಿಸಿಕೊಂಡು ಈ ಪಡೆಯ ಜೊತೆಗೆ ಹೋಗಲು ಪೋಲಕರನ್ನು ಕೇಳಿಕೊಂಡೆ. ಈ ಪ್ರಯಾಣಿಕರಿಗೆ ನನ್ನ ಬಂಧನವಾದುದನ್ನು ತಿಳಿಸಲು ಮಾತ್ರ ಪೋಲೀಸ್ ಮುಖ್ಯಾಧಿಕಾರಿ ನನಗೆ ಒಪ್ಪಿಗೆ ಕೊಟ್ಟ. 'ಶಾಂತತೆ ಮುಂತಾದವುಗಳನ್ನು ಬಿಡಕೂಡದೆ'ಂದು ನಾನು ಹೇಳುತ್ತಿರುವಷ್ಟರಲ್ಲಿ ಈ ಅಧಿಕಾರಿ ಅಡ್ಡ ಬಂದು 'ನೀನು ಈಗ ಸೆರೆಯಾಳು. ಭಾಷಣ ಕೊಡಲು ಅವಕಾಶವಿಲ್ಲ' ಎಂದ.

ನನ್ನ ಪರಿಸ್ಥಿತಿಯ ಅರಿವು ನನಗಾಯಿತು. ಈ ಅಧಿಕಾರಿ ನಾನು ಮಾತನಾಡುವುದನ್ನು ನಿಲ್ಲಿಸಿ ಬಂಡಿ ಹೊಡೆಯಲು ಬಂಡಿಯವನಿಗೆ ಹೇಳಿದ. ಪ್ರಯಾಣಿಕರೆಲ್ಲ ಒಂದು ಕ್ಷಣದಲ್ಲಿ ಕಾಣದಂತಾದರು.

ನನ್ನನ್ನು ಗ್ರೇಲಿಂಗ್‌ಸ್ಟ್ಯಾಡಿಗೆ ಒಯ್ದರು— ಅಲ್ಲಿಂದ ಬಾಲ್ಫರ್ ಮೂಲಕ ಹೆಡಲ್‌ಬರ್ಗಿಗೆ. ಆ ರಾತ್ರಿ ಅಲ್ಲಿಯೆ ಕಳೆಯಿತು.

ಈ ನಮ್ಮ ಪ್ರಯಾಣಿಕರ ಸಾಲು ಪೋಲಕರ ಮುಂದಾಳುತನದಲ್ಲಿ ಮುಂದೆ ಸಾಗಿ ಆ ರಾತ್ರಿ ಗ್ರೇಲಿಂಗ್‌ಸ್ಟ್ಯಾಡಿನಲ್ಲಿ ಕಳೆಯಿತು. ಇವರೆಲ್ಲ ೧೦ನೆ ತಾರೀಕು ಬೆಳಿಗ್ಗೆ ಬಾಲ್ಫರ್ ಸೇರಿದರು. ಇವರನ್ನೆಲ್ಲ ಕರೆದುಕೊಂಡು ನೇಟಾಲಿಗೆ ಬಿಡಲು ನಿಲ್ದಾಣದಲ್ಲಿ ಮೂರು ಉಗಿಬಂಡಿ ಸಿದ್ಧವಾಗಿದ್ದುವು. ನಮ್ಮ ಪ್ರಯಾಣಿಕರು ಸ್ವಲ್ಪ ವಾದಹಾಕಿದರು. ಸೆರೆಯಾಗಬೇಕೆಂದು ನಾನು ಬಂದು ಹೇಳಿದರೆ ಮಾತ್ರ ತಾವು ಬಂಡಿ ಹತ್ತುವುದಾಗಿ ಹಟಹಿಡಿದರು. ಆದರೆ ಸೆರೆಮನೆಯೆ ನಮ್ಮ ಗುರಿಯೆಂದೂ ಆದ್ದರಿಂದ ಹೀಗೆ ಹಟಹಿಡಿಯಕೂಡದೆಂದೂ ಪೋಲಕ್ ಮತ್ತು ಕಚಾಲಿಯಾ ಸೆಟ್ಟರು ಜನರಿಗೆ ಬುದ್ಧಿ ಹೇಳಿದರು. ಕೊನೆಗೆ ಈ ಪ್ರಯಾಣಿಕರು ಒಪ್ಪಿ ಉಗಿಬಂಡಿ ಹತ್ತಿದರು.

## ೪೯. ಸತ್ಯಾಗ್ರಹದ ವಿಜಯ

ನನ್ನನ್ನು ತಿರಿಗಿ ನ್ಯಾಯಾಸ್ಥಾನದೆದುರು ನಿಲ್ಲಿಸಿದರು. ಈ ಸಲ ನನ್ನ ಬಂಧನದ ಆಜ್ಞಾಪತ್ರ ಬಂದದ್ದು ಡಂಡಿಯಿಂದ. ಆದ್ದರಿಂದ ಉಗಿಬಂಡಿಯು

ಮೂಲಕ ಅಂದೇ ನನ್ನನ್ನು ಅಲ್ಲಿಗೆ ಕರೆದೊಯ್ದರು.

ಬಾಲ್ಫರಿನಲ್ಲಿ ಪೋಲಕರನ್ನು ಸೆರೆಹಿಡಿಯಲಿಲ್ಲ ಮಾತ್ರವಲ್ಲ; ಅಧಿಕಾರಿಗಳಿಗೆ ಮಾಡಿದ ಸಹಾಯಕ್ಕಾಗಿ ಅವರನ್ನು ಅಭಿನಂದಿಸಿದರು. ಆದರೆ ಇವರು ಭಾರತಕ್ಕೆ ಪ್ರಯಾಣ ಬೆಳೆಸುವುದಕ್ಕಾಗಿ ಚಾರ್ಲ್ಸ್‌ಟೌನಿನಲ್ಲಿ ಉಗಿಬಂಡಿಗೆ ಹೊರಟು ನಿಂತಾಗ ಇವರ ಸೆರೆಯಾಯಿತು. ಶ್ರೀ. ಕಾಲೆನ್‌ಬಾಕರನ್ನೂ ಬಂಧಿಸಿದರು. ಇವರಿಬ್ಬರನ್ನೂ ವಾಕ್ಸ್‌ರಸ್ಟ್ ಸೆರೆಮನೆಯಲ್ಲಿಟ್ಟರು.

- ೧೧ನೆ ತಾರೀಕಿಗೆ ಡಂಡಿಯಲ್ಲಿ ನನ್ನ ವಿಚಾರಣೆಯಾಗಿ ಒಂಬತ್ತು ತಿಂಗಳು ಸಶ್ರಮ ಶಿಕ್ಷೆಯಾಯಿತು. ಪ್ರತಿಬಂಧಿತ ಜನರನ್ನು ಟ್ರಾನ್ಸ್‌ವಾಲ್ ಪ್ರವೇಶಿಸುವಂತೆ ಪ್ರೋತ್ಸಾಹಿಸಿದೆನೆಂಬ ಆಪಾದನೆಯ ಮೇಲೆ ವಾಕ್ಸ್‌ರಸ್ಟಿನಲ್ಲಿ ಇನ್ನೊಂದು ವ್ಯವಹರಣೆ ನಡೆದಿರಲಿಲ್ಲವೇ? ಅದಕ್ಕಾಗಿ ಡಂಡಿಯಿಂದ ೧೩ನೆ ತಾರೀಕಿಗೆ ವಾಕ್ಸ್‌ರಸ್ಟಿಗೆ ಕರೆದೊಯ್ದರು. ಅಲ್ಲಿ ಕಾಲೆನ್‌ಬಾಕರನ್ನೂ ಪೋಲಕರನ್ನೂ ಕಂಡು ನನಗೆ ಬಹಳ ಸಂತೋಷವಾಯಿತು.

ನಾನು ಪೋಲಕ್ ಮತ್ತು ಕಾಲೆನ್‌ಬಾಕರ ಜೊತೆಗೆ ನ್ಯಾಯಾಸ್ಥಾನದಲ್ಲಿ ಹಾಜರಾದೆ. ನಮಗೆ ಒಬ್ಬೊಬ್ಬರಿಗೆ ಮೂರು ತಿಂಗಳು ಶಿಕ್ಷೆಯಾಯಿತು. ವಾಕ್ಸ್‌ರಸ್ಟ್ ಸೆರೆಮನೆಯಲ್ಲಿ ನಾವು ಕೆಲವು ದಿನ ಸುಖವಾಗಿ ಕಳೆದೆವು. ಅಲ್ಲಿಗೆ ಪ್ರತಿದಿನವೂ ಹೊಸ ಸೆರೆಯಾಳುಗಳು ಬಂದು ಹೊರಗಿನ ಸುದ್ದಿ ಎಲ್ಲವನ್ನೂ ಹೇಳುತಿದ್ದರು. ಈ ಸತ್ಯಾಗ್ರಹಿ ಸೆರೆಯಾಳುಗಳಲ್ಲಿ ಹರ್ಬತ್‌ಸಿಂಗ್ ಎಂಬುವವನು ೭೫ ವರುಷದ ಹಣ್ಣುಮುದುಕ. ಅವನು ಕಣಿಯಲ್ಲಿ ದುಡಿಯುವ ಕೂಲಿಕಾರನಲ್ಲ. ಅವನ ಕರಾರು ಅವಧಿ ಎಷ್ಟೋ ವರ್ಷಗಳ ಹಿಂದೆ ಮುಗಿದಿತ್ತು. ಆದ್ದರಿಂದ ಇವನು ಸಂಪುಗಾರನಾಗಿರಲಿಲ್ಲ. ನನ್ನ ಸೆರೆಯಾದ ಮೇಲೆ ಹಿಂದೀಯರಲ್ಲಿ ತುಂಬಾ ಉತ್ಸಾಹವೇರಿತು. ಆದ್ದರಿಂದ ಅನೇಕರು ನೇಟಾಲಿನಿಂದ ಟ್ರಾನ್ಸ್‌ವಾಲಿಗೆ ಬಂದು ಸೆರೆಯಾದರು. ಹರ್ಬತ್‌ಸಿಂಗ್ ಇಂತಹ ಉತ್ಸಾಹಿಗಳಲ್ಲಿ ಒಬ್ಬ.

"ನೀನು ಸೆರೆಮನೆಗೆ ಬಂದದ್ದೇಕೆ?"- ಹರ್ಬತ್‌ಸಿಂಗನಿಗೆ ನಾನು ಕೇಳಿದೆ- "ನಿನ್ನಂತಹ ಮುದುಕರು ಸೆರೆಮನೆ ಸೇರಬೇಕೆಂದು ನಾನು ಹೇಳಿರಲಿಲ್ಲ."

ಅದಕ್ಕೆ ಹರ್ಬತ್‌ಸಿಂಗ್ "ನೀವು, ನಿಮ್ಮ ಹೆಂಡತಿ, ಮಕ್ಕಳು ನಮಗಾಗಿ ಸೆರೆಮನೆ ಸೇರಿದಾಗ ನಾವು ಹೊರಗಿರುವುದು ಹೇಗೆ?" ಎಂದ.

“ಆದರೆ ನೀನು ಸೆರೆಮನೆಯ ಕಷ್ಟ ಸಹಿಸಲಾರೆ. ಆದ್ದರಿಂದ ನಾನು ಹೇಳುವುದಾದರೆ ನೀನು ಬಿಡುಗಡೆಯಾಗುವುದು ಮೇಲು. ಅದಕ್ಕೆ ಪ್ರಯತ್ನ ಪಡಲೇ ?”

“ಎಂದಿಗೂ ಕೂಡದು. ನಾನು ಖಂಡಿತ ಸೆರೆಮನೆಯಿಂದ ಹೊರಗೆ ಹೋಗುವುದಿಲ್ಲ. ಒಂದಲ್ಲ ಒಂದು ದಿನ ಸಾಯಲೇಬೇಕು. ಸೆರೆಮನೆಯಲ್ಲಿ ಸತ್ತರೆ ಎಷ್ಟು ಸುಖ ಬಲ್ಲಿರಾ?”

ಅವನ ಅಚಲವಾದ ಮನಸ್ಸನ್ನು ಸಡಿಲಿಸುವುದು ನನ್ನಿಂದಾಗಲಿಲ್ಲ ಈ ಓದುಬರಹವಿಲ್ಲದ ತಪಸ್ವಿಗೆ ನಾನು ನಮ್ರನಾಗಿ ತಲೆಬಾಗಿದೆ. ಹರ್ಬತ್ ಸಿಂಗನ ಇಚ್ಛೆ ಕೈಗೂಡಿತು. ಅವನು ೧೯೧೪ನೆ ಜಾನೆವರಿ ೫ರಲ್ಲಿ ಸೆರೆಮನೆಯಲ್ಲಿಯೆ ದೇಹವಿಟ್ಟ. ನೂರಾರು ಹಿಂದೀಯರು ಸೇರುವ ಬಹುಗೌರವದಿಂದ ಹಿಂದೂ ಪದ್ಧತಿಯಂತೆ ಅವನ ಶವಸಂಸ್ಕಾರವಾಯಿತು. ಸತ್ಯಾಗ್ರಹ ಕದನದಲ್ಲಿ ಇಂತಹ ಹರ್ಬತ್‌ಸಿಂಗ್ ಒಬ್ಬನೆ ಅಲ್ಲ; ನೂರಾರು ಜನರಿದ್ದರು. ಆದರೆ ಸೆರೆಮನೆಯಲ್ಲಿ ಸಾಯುವ ಪುಣ್ಯ ಅವನೊಬ್ಬನಿಗೇ ಮೀಸಲಾಗಿತ್ತು. ಆದ್ದರಿಂದ ದಕ್ಷಿಣ ಆಫ್ರಿಕೆಯ ಸತ್ಯಾಗ್ರಹದ ಇತಿಹಾಸದಲ್ಲಿ ಅವನ ಹೆಸರು ಚಿರಸ್ಮರಣೀಯವಾದುದು.

ಈಗ ನಮ್ಮ ಪ್ರಯಾಣಿಕರ ಕಡೆ ತಿರುಗೋಣ. ಉಗಿಬಂಡಿಯ ಮೂಲಕ ಇವರನ್ನು ನೇಟಾಲಿಗೆ ಕರೆತಂದ ಮೇಲೆ ಎಲ್ಲರನ್ನೂ ಸೆರೆಮನೆಗೆ ಸೇರಿಸಿದರು. ಸರಕಾರ ಕಣಿಗಳಿಗೇ ಮುಳ್ಳುತಂತಿಯ ಬೇಲಿ ಹಾಕಿ, ಅವು ಡಂಡಿ ಮತ್ತು ನ್ಯೂಕ್ಯಾಸಲ್ ಸೆರೆಮನೆಗಳ ವಿಸ್ತರಣಗಳೆಂದು ಸಾರಿ, ಕೂಲಿಕಾರರಿಂದ ಒತ್ತಾಯದಿಂದ ಕೆಲಸ ತೆಗೆದುಕೊಳ್ಳಲಾರಂಭಿಸಿತು. ಪ್ರತ್ಯಕ್ಷವಾದ ಈ ಅಡಿಮೆಯಿಂದ ಭಾರತದಲ್ಲಿ ಬಿರುಗಾಳಿ ಎದ್ದಿತು. ಶ್ರೀ. ಗೋಖಲೆಯವರು ಬಹಳವಾಗಿ ಬೇನೆ ಬಿದ್ದಿದ್ದರೂ ಲೆಕ್ಕಿಸದೆ ಇದಕ್ಕಾಗಿ ಬಹಳ ಪ್ರಯತ್ನಪಟ್ಟರು. ಭಾರತದ ವೈಸ್‌ರಾಯರಾದ ಲಾರ್ಡ್ ಹಾರ್ಡಿಂಜರು ಪ್ರಖ್ಯಾತ ಭಾಷಣ ಮಾಡಿದ್ದೂ ಆಗಲೇ— ೧೯೧೩ನೆ ಡಿಸೆಂಬರು. ವೈಸ್‌ರಾಯರು ಸಾಮ್ರಾಜ್ಯದ ಉಳಿದ ಭಾಗಗಳ ಆಡಳಿತದ ವಿಷಯದಲ್ಲಿ ಸಾರ್ವಜನಿಕವಾಗಿ ಟೀಕಿಸುವ ವಾಡಿಕೆ ಇಲ್ಲ. ಆದರೆ ಈ ಸಂದರ್ಭದಲ್ಲಿ ಲಾರ್ಡ್ ಹಾರ್ಡಿಂಜರು ಯೂನಿಯನ್ ಸರಕಾರದ ಮೇಲೆ ಉಗ್ರ ದೋಷಾರೋಪಣೆ

ಮಾಡಿದುದಲ್ಲದೆ ಸತ್ಯಾಗ್ರಹಿಗಳ ಪಕ್ಷವನ್ನು ಮನಃಪೂರ್ವಕವಾಗಿ ಎತ್ತಿ ಹಿಡಿದರು. ಲಾರ್ಡ್ ಹಾರ್ಡಿಂಜರ ಈ ಸ್ಥೈರ್ಯದಿಂದ ಎಲ್ಲ ಕಡೆಗೂ ಅಗಾಧವಾದ ಪರಿಣಾಮವಾಯಿತು. ವಿಚಾರಣೆಯ ಸಮಿತಿಯೊಂದು ಯೂನಿಯನ್ ಸರಕಾರದಿಂದ ನಿಯಮಿತವಾಯಿತು. ಆದರಲ್ಲಿ ಹಿಂದೀಯರಾರೂ ಇರದಿದ್ದರೂ ಜನರಲ್ ಸ್ಮಟ್ಸರೊಂದಿಗೆ ಸಾಗಿಸಿದ ಪತ್ರವ್ಯವಹಾರದಿಂದ ಇನ್ನು ಮುಂದೆ ಸತ್ಯಾಗ್ರಹದ ಹೋರಾಟವಿಲ್ಲದೆ ನಮ್ಮ ಧ್ಯೇಯಸಾಧನೆ ಆಗಬಲ್ಲುದೆಂದು ನನಗೆ ಮನವರಿಕೆಯಾಯಿತು. ಸಮಿತಿಯ ವರದಿ ಬಂದ ಸ್ವಲ್ಪ ದಿನಗಳಲ್ಲಿ ಯೂನಿಯನ್ ಸರಕಾರ ಈ ಅತಿವಿಲಂಬಿತ ಒಪ್ಪಂದವನ್ನು ಬಳಕೆಗೆ ತರಲು ತನ್ನ ಗ್ಯಾಜೆಟಿನಲ್ಲಿ ‘ಹಿಂದೀ ಪರಿಹಾರ ಮಸೂದೆ’ ಯನ್ನು ಪ್ರಕಟಿಸಿತು. ಈ ಶಾಸನದಿಂದ ೩ ಪೌಂಡು ತಲೆಗಂದಾಯವು ಹೋಯಿತು. ಹಿಂದೂಸ್ಥಾನದಲ್ಲಿ ನ್ಯಾಯಸಮ್ಮತವೆಂದು ಎಣಿಸಲಾದ ಮದುವೆಗಳು ಆಫ್ರಿಕೆಯಲ್ಲಿಯೂ ಒಪ್ಪಿಕೊಳ್ಳಲ್ಪಟ್ಟವು. ಹೆಬ್ಬೆಟ್ಟಿನ ಗುರುತಿನೊಂದಿಗಿದ್ದ ವಸತಿಯ ಸನದು (Domicile Certificate) ಉಳ್ಳವನಿಗೆ ಯೂನಿಯನ್ ಪ್ರದೇಶದಲ್ಲಿ ಪ್ರವೇಶಾಧಿಕಾರ ದೊರೆಯಿತು.

ಹೀಗೆ, ಸತ್ಯಾಗ್ರಹದ ಈ ಮಹಾ ಹೋರಾಟ ಎಂಟು ವರುಷಗಳ ನಂತರ ಕೊನೆಗಂಡಿತು. ಮತ್ತು ದಕ್ಷಿಣ ಆಫ್ರಿಕೆಯ ಹಿಂದೀಯರಿಗೆ ಇನ್ನು ಮುಂದೆ ನೆಮ್ಮದಿ ಸಿಗಬಹುದೆಂದು ತೋರಿತು. ಆಗ, ಇಂಗ್ಲೆಂಡಿನಲ್ಲಿದ್ದ ಶ್ರೀ. ಗೋಖಲೆಯವರನ್ನು ಕಂಡು ಸ್ವರಾಷ್ಟ್ರಭೂಮಿಗೆ ಮರಳುವ ಉದ್ದೇಶದಿಂದ ನಾನು ೧೯೧೪ನೇ ಜುಲೈ ೧೮ರಲ್ಲಿ ಅಲ್ಲಿಗೆ ಹೊರಟೆ. ಅನೇಕ ವರುಷಗಳ ನಂತರ ತಾಯ್ನಾಡಿಗೆ ಮರಳುತ್ತಿರುವುದರಿಂದಲೂ ಗೋಖಲೆಯವರ ಮುಂದಾಳುತನದಲ್ಲಿ ದೇಶಸೇವೆ ಕೈಕೊಳ್ಳುವ ಕುತೂಹಲದಿಂದಲೂ ಒಂದು ಕಡೆ ಸಂತೋಷ. ನಾನು, ಆಯುಷ್ಯದ ಇಪ್ಪತ್ತೊಂದು ವರುಷಗಳನ್ನು ಮಾನವ ಜೀವನದ ಸಿಹಿ ಕಹಿಗಳನ್ನು ಅನುಭವಿಸುತ್ತ ಕಳೆದ, ಹಾಗೂ ನನ್ನ ಜೀವನದ ವೃತ್ತಿಯ ನಿರ್ಧಾರಕ್ಕೆ ಕಾರಣವಾದ, ದಕ್ಷಿಣ ಆಫ್ರಿಕೆಯನ್ನು ತೊರೆಯುತ್ತಿದ್ದೇನಲ್ಲಾ ಎಂಬ ಇನ್ನೊಂದು ಕಡೆ ದುಃಖ. ಹೀಗೆ ನನ್ನ ಮನಸ್ಸು ಸುಖ ದುಃಖಗಳ ನಡುವೆ ಉಯ್ಯಾಲೆಯಾಡುತ್ತಿತ್ತು.

---

ಅಚ್ಚಳಿ=ಹಾಳಾಗು, ಮಸುಕಾಗು
ಅಟ್ಟಿಸು=ಗಟ್ಟಿಮಾಡು
ಅಡಿಮೆ=ದಾಸ್ಯ
ಅಲ್ಲಾಟ=ಅಲುಗಾಡುವಿಕೆ
ಅವಧಿ=ಟರ್ಮು (Term)
ಆಧಾರಕೋಶ = Dictionary Reference
ಉಪ್ಪಾರ=ಗಚ್ಚಿನ, ಗೋಡೆಯ ಕೆಲಸ ಮಾಡುವವ
ಊಟಿ= ಝರಿ
ಒಂಟು = ಒಗ್ಗು
ಕಕ್ಕಸು= ಪಾಯಖಾನೆ
ಕಕ್ಷಿಗಾರ=ಪಕ್ಷಕಾರ
ಕಟ್ಟಳೆ=ಕಾಯದೆ
ಕಮಟು=ಕೊಳೆತು ನಾರುವ
ಕಾಲುಮಣೆ= ಬೆಂಚು
ಕೀಟಲೆ = ಕಾಟ, ತೊಂದರೆ
ಕುಂಬು= ಗೆದ್ದಲುಹತ್ತಿದ್ದು, ಸತ್ವವಿಲ್ಲದ್ದು
ಕೆಲಸಿಗ = ಕ್ಷೌರಿಕ
ಕೋರಿ = ಬೀದಿಯಲ್ಲಿ ತಿರುಗಾಡಿ ವ್ಯಾಪಾರ ಮಾಡುವವ
ಕೋವಿ = ತುಬಾಕಿ, ಬಂದೂಕು
ಗಡುವು= ವಾಯಿದೆ
ಗೇಯು= ದುಡಿ, ಕೆಲಸ ಮಾಡು
ಚಕ್ಕಳ = ಒಣಗಿದ ಚರ್ಮ
ಚೊಕ್ಕ = ಶುದ್ಧ, Net
ಜೋಪಡಿ= ಗುಡಿಸಲು
ಡಂಕು = ಹಗೆತನ, ಈರ್ಷೆ
ತಡಿ = ತೀರ, ದಂಡೆ
ತಳವಾರ=ಪೋಲೀಸು, ಕಾವಲುಗ
ನವುರು= ನಯ
ಪಟ್ಟುಹಿಡಿ= ಹಟ
ಪಡಿ= ರೇಶನ್, ಸೀದಾ
ಪಡಿಪಾಟಲು= ಕಷ್ಟ
ಬವಳಿ=ಮೂರ್ಛೆ, ತಲೆತಿರುಗುವುದು
ಬಿಡದಿ= ಬಿಡಾರ
ಬೇನಿಗ — ರೋಗಿ
ಬೊಕ್ಕಣ = ಜೇಬು, ಕಿಸೆ
ಮುಡ್ಡಿಯಾಗು= ಹೆಚ್ಚಾಗಿ ಬೇಯು
ಮನವಿ= ಅರ್ಜಿ
ಮನೆವಾರ್ತೆ = ಮನೆಯಲ್ಲಿ ಊಟ ವಸತಿಮಾಡಿಕೊಂಡಿರುವಿ
ಮುಪ್ಪುರಿ=ಮೂರು ಹುರಿಯುಳ್ಳ ವಸ್ತು
ವರ್ತನೆ = ಕಾಯಂ ಗೊತ್ತುಮಾಡಿಕೆ
ಸಾಲುಕೋಣೆ= ಸಾಲಾಗಿದ್ದ ಕೋಣೆಗಳು
ಹಳಕಲು= ಹಳೆಯದು
ಹೊಣೆ= ಜಾಮೀನು